ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು, ಬಾಬಯ್ಯನ ಗುಡಿ ಹಿಂದೆ, ಪಾವಗಡ ಇವರು ರೂ.2,07.000/– (ರೂಪಾಯಿಗಳು ಎರಡು ಲಕ್ಷ ಏಳು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಶ್ರೀನಿವಾಸ ನಗರ, ಪಾವಗಡ | ಅಪೂರ್ಣಗೊಂಡಿರುವ ಮನೆ | 3769/89 | ವಿ. ಗಂಗಮ್ಮ ಅಲಿಯಾಸ್ ವಿ. ಪದ್ಮಾವತಮ್ಮ ಕೋಂ ವಿ. ವೆಂಕಟಸ್ವಾಮಿ, ಸಪ್ತಗಿರಿ ಹೋಂ ಅಪ್ಲೆಯನ್ಸ್ಸ್, ಮಿನಿ ವಿಧಾನಸೌದ ಎದುರು, ಪಾವಗಡ. | 30x40 ಅಡಿಗಳು | ಪೂರ್ವಕ್ಕೆ: ಸೈಟ್ ನಂ.90 ಪಶ್ಚಿಮಕ್ಕೆ: ಸೈಟ್‌ನಂ.88 ಉತ್ತರಕ್ಕೆ: ಸೈಟ್ ನಂ.82 ದಕ್ಷಿಣಕ್ಕೆ: ರಸ್ತೆ. |

ಮಾರಾಟದ ಮೊತ್ತ ರೂ.2,07,000/–

ಮಾರಾಟದ ದಿನಾಂಕ:21.07.2008

ನಿಗದಿತ ಮುದ್ರಾಂಕ ಶುಲ್ಕ ರೂ.17388/–

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ಅಕ್ಟೋಬರ್ ಮಾಹೆ 10 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1215

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ನ್ಯಾಯಾಲಯ**

**ಅಮಲ್ಜಾರಿ ಅರ್ಜಿ ಸಂಖ್ಯೆ: 108: 2003–04**

**ಬಿಡ್‌ದಾರರು:** ಎಂ.ಜಿ. ನಾಗಮಣಿ ಕೋಂ ಹೆಚ್.ದೇವರಾಜು, ಬಾಬಯ್ಯನಗುಡಿ ಹಿಂದೆ, ಪಾವಗಡ.

**ಡಿಕ್ರಿ ಹೋಲ್ಡರ್**

ಪ್ರಧಾನ ವ್ಯವಸ್ಥಾಪಕರು,
ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,
ಶಿರಾ, ತುಮಕೂರು ಜಿಲ್ಲೆ.

**ವಿರುದ್ಧ**

**ತೀರ್ಪುಋಣಿ**

ವಿ. ವೇಣುಗೋಪಾಲಕೃಷ್ಣ ಬಿನ್ ವಿ. ವೆಂಕಟಸ್ವಾಮಿ, ಸಪ್ತಗಿರಿ ಹೋಂ ಅಪ್ಲೆಯನ್ಸ್ಸ್ ಮಿನಿವಿಧಾನಸೌಧ ಎದುರು, ಪಾವಗಡ.

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.153142.00 ದಾವಾ ಶುಲ್ಕ, ಮುಂದುವರೆದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 108/2003–04 ಮೊಬಲಗು ರೂ.188934.00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:21.07.2008ಕ್ಕೆ ರೂ.389286.00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:21.07.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ದುದಾರರಾದ ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು, ಬಾಬಯ್ಯನಗುಡಿ ಹಿಂದೆ, ಪಾವಗಡ ಇವರಿಗೆ ಅಪೂರ್ಣಗೊಂಡಿರುವ ಮನೆಯನ್ನು ರೂ.165000/– (ರೂಪಾಯಿಗಳು ಒಂದು ಲಕ್ಷದ ಅರವತ್ತೈದು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4) (ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸ.ಸಂ. ಸನಿ 33/ ಎಬಿಎನ್/ ಎಸ್.ಸಿ./73/ 2008-09, ದಿನಾಂಕ:10ನೇ ಅಕ್ಟೋಬರ್, 2008**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6) (ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ದಿ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಶ್ರೀ ವಿ. ವೇಣುಗೋಪಾಲಕೃಷ್ಣ ಬಿನ್ ವಿ. ವೆಂಕಟಸ್ವಾಮಿ, ಸಪ್ತಗಿರಿ ಹೋಂ ಅಪ್ಲೆಯನ್ಸ್‌ಸ್, ಮಿನಿವಿಧಾನಸೌಧ ಎದುರು, ಪಾವಗಡ ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ತಿರಾಸ್ತಿಗಳನ್ನು ದಿನಾಂಕ:21.07.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್.ದೇವರಾಜು, ಬಾಬಯ್ಯನಗುಡಿ ಹಿಂದೆ, ಪಾವಗಡ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು, ಬಾಬಯನಗುಡಿ ಹಿಂದೆ, ಪಾವಗಡ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.165000/- ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ವಿ. ವೆಂಕಟಗೋಪಾಲಕೃಷ್ಣ ಬಿನ್ ವಿ. ವೆಂಕಟಸ್ವಾಮಿ, ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶ್ರೀನಿವಾಸ ನಗರ, ಪಾವಗಡ ಟೌನ್‌ನಲ್ಲಿರುವ ಅಪೂರ್ಣಗೊಂಡಿರುವ ಮನೆಯ ಖಾತೆ ನಂ.3770/90 ವಿಸ್ತೀರ್ಣ 30x40 ಅಡಿಗಳುಳ್ಳ ಮನೆ, ಈ ಮನೆಗೆ ಚೆಕ್ಕುಬಂದಿ: ಪೂರ್ವಕ್ಕೆ: ಬೈಪಾಸ್ ರಸ್ತೆ, ಪಶ್ಚಿಮಕ್ಕೆ ಸೈಟ್ ನಂ.89ನೇ ನಂಬರಿನ ನಿವೇಶನ, ಉತ್ತರಕ್ಕೆ: ಸೈಟ್ ನಂ.83ನೇ ನಂಬರಿನ ಸೈಟು, ದಕ್ಷಿಣಕ್ಕೆ: ಪಟ್ಟಣ ಪಂಚಾಯ್ತಿ ರಸ್ತೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ಅಕ್ಟೋಬರ್ ಮಾಹೆ 10 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:** 108: 2003-04

**ಉಪಸ್ಥಿತರು:** ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು, ಬಾಬಯ್ಯನ ಗುಡಿ ಹಿಂದೆ, ಪಾವಗಡ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ದಿ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,<br>ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ವಿ. ವೇಣುಗೋಪಾಲಕೃಷ್ಣ ಬಿನ್ ವಿ. ವೆಂಕಟಸ್ವಾಮಿ,<br>ಸಪ್ತಗಿರಿ ಹೋಂ ಅಪ್ಲೆಯನ್ಸ್‌ಸ್ ಮಿನಿವಿಧಾನಸೌಧ<br>ಎದುರು, ಪಾವಗಡ. |

ದಿ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:28.01.2003 ರಂದು ಪಡೆದ ಡಿಕ್ರಿ ನಂ. ಜೆ.ಆರ್.ಬಿ.:5648: 2000-01ರ ಪ್ರಕಾರ ದಿನಾಂಕ:30.08.2003 ರಂದು ಸಿ.ಇ.ಪಿ.ನಂ.108/ 2003-04ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀ ವಿ. ವೇಣುಗೋಪಾಲಕೃಷ್ಣ ಬಿನ್ ವಿ. ವೆಂಕಟಸ್ವಾಮಿ, ಸಪ್ತಗಿರಿ ಹೋಂ ಅಪ್ಲೆಯನ್ಸ್‌ಸ್, ಮಿನಿವಿಧಾನಸೌಧ ಎದುರು, ಪಾವಗಡ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:21.07.2008 ರಂದು ದಿ ಟೌನ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು, ಬಾಬಯ್ಯನ ಗುಡಿ ಹಿಂದೆ, ಪಾವಗಡ ಇವರು ರೂ.1,65,000/- (ರೂಪಾಯಿಗಳು ಒಂದು ಲಕ್ಷದ ಅರವತ್ತೈದು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಎಂ.ಜಿ. ನಾಗಮಣಿ ಕೋಂ ಹೆಚ್. ದೇವರಾಜು ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

ಸ್ಥಿರಾಸ್ತಿಯ ವಿವರ

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಶ್ರೀನಿವಾಸ ನಗರ, ಪಾವಗಡ | ಅಪೂರ್ಣಗೊಂಡಿರುವ ಮನೆ | 3770/90 | ವಿ. ವೇಣುಗೋಪಾಲಕೃಷ್ಣ ಬಿನ್ ಎ. ವೆಂಕಟಸ್ವಾಮಿ, ಸಪ್ತಗಿರಿ ಹೋಂ ಅಪ್ಲೆಯನ್ಸ್‌ಸ್, ಪಾವಗಡ. | 30x40 ಅಡಿಗಳು | ಪೂರ್ವಕ್ಕೆ: ಬೈಪಾಸ್ ರಸ್ತೆ ಪಶ್ಚಿಮಕ್ಕೆ: 89ನೇ ನಂಬರ್ ನಿವೇಶನ, ಉತ್ತರಕ್ಕೆ: 83ನೇ ನಂಬರ್ ನಿವೇಶನ. ದಕ್ಷಿಣಕ್ಕೆ: ಪಟ್ಟಣ ಪಂಚಾಯ್ತಿ ರಸ್ತೆ. |

ಮಾರಾಟದ ಮೊತ್ತ ರೂ.1,65,000/–

ಮಾರಾಟದ ದಿನಾಂಕ:21.07.2008

ನಿಗದಿತ ಮುದ್ರಾಂಕ ಶುಲ್ಕ ರೂ.13860/–

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ಅಕ್ಟೋಬರ್ ಮಾಹೆ 10 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1216

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಗಳು**

**ಅಮಲ್ಜಾರಿ ಅರ್ಜಿ ಸಂಖ್ಯೆ: 56: 2003–04**

**ಬಿಡ್‌ದಾರರು:** ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ್ ಕೋಟೆ, ಶಿರಾ.

**ಡಿಕ್ರಿ ಹೋಲ್ಡರ್**
ಪ್ರಧಾನ ವ್ಯವಸ್ಥಾಪಕರು,
ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,
ಶಿರಾ, ತುಮಕೂರು ಜಿಲ್ಲೆ.

**ವಿರುದ್ಧ**

**ತೀರ್ಪುಋಣಿ**
ಪಿ. ರಾಜಣ್ಣ ಬಿನ್ ಪುಟ್ಟಶಾಮಯ್ಯ ಕೋಟೆ, ಶಿರಾ, ತುಮಕೂರು ಜಿಲ್ಲೆ.

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.50,000–00, ದಾವಾ ಶುಲ್ಕ ರೂ.420–00, ಮುಂದುವರೆದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ಪ್ರಾಂತ–01, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 56/2003–04 ಮೊಬಲಗು ರೂ.109011–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:30.11.2008ಕ್ಕೆ ರೂ.195190–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:30.11.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ್, ಕೋಟೆ, ಶಿರಾ, ಇವರಿಗೆ ಮನೆಯನ್ನು ರೂ.35,000/– (ರೂಪಾಯಿಗಳು ಮೂವತ್ತೈದು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4) (ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸ.ಸಂ. ಸನಿ 33/ ಎಬಿಎನ್/ ಎಸ್.ಸಿ./78/ 2008–09, ದಿನಾಂಕ:4ನೇ ನವೆಂಬರ್, 2008**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6) (ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ

ಮೇರೆಗೆ ಶಿರಾ ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಪಿ. ರಾಜಣ್ಣ ಬಿನ್ ಪುಟ್ಟಶ್ಯಾಮಯ್ಯ ಕೋಟೆ, ಶಿರಾ, ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ತಿರಾಸ್ತಿಗಳನ್ನು ದಿನಾಂಕ:30.11.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ ಕೋಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ ಕೋಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.35,000/– ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಪಿ. ರಾಜಣ್ಣ ಬಿನ್ ಪುಟ್ಟಶ್ಯಾಮಯ್ಯ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್‌ನಲ್ಲಿ ಕೋಟೆಯಲ್ಲಿರುವ ಮನೆ, ಖಾತೆ ನಂ.2118/2083, ವಿಸ್ತೀರ್ಣ 4.8x9.1 ಮೀ.ವುಳ್ಳ ಮನೆ, ಈ ಮನೆಗೆ ಚೆಕ್ಕುಬಂದಿ: ಪೂರ್ವಕ್ಕೆ: ಭೀಮಯ್ಯನ ಮನೆ, ಪಶ್ಚಿಮಕ್ಕೆ: ಓಬಳಮ್ಮನ ಸೈಟು, ಉತ್ತರಕ್ಕೆ: ಪುಟ್ಟಮಲ್ಲಪ್ಪನ ಮನೆ, ದಕ್ಷಿಣಕ್ಕೆ: ಗಲ್ಲಿ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:** 56: 2003–04

**ಉಪಸ್ಥಿತರು:** ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ ಕೋಟೆ, ಶಿರಾ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಪಿ. ರಾಜಣ್ಣ ಬಿನ್ ಪುಟ್ಟಶಾಮಯ್ಯ ಕೋಟೆ, ಶಿರಾ, ತುಮಕೂರು ಜಿಲ್ಲೆ. |

ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:10.01.2003 ರಂದು ಪಡೆದ ಡಿಕ್ರಿ ನಂ. ಜೆ.ಆರ್.ಬಿ.:ಡಿ.ಐ.ಎಸ್:2695: 2002–03ರ ಪ್ರಕಾರ ದಿನಾಂಕ:30.08.2003 ರಂದು ಸಿ.ಇ.ಪಿ.ನಂ.56/2003–04ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀ ಪಿ. ರಾಜಣ್ಣ ಬಿನ್ ಪುಟ್ಟಶಾಮಯ್ಯ ಕೋಟೆ, ಶಿರಾ, ತುಮಕೂರು ಜಿಲ್ಲೆ, ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:30.11.2007 ರಂದು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ, ಕೋಟೆ, ಶಿರಾ, ಇವರು ರೂ.35,000/– (ರೂಪಾಯಿಗಳು ಮೂವತ್ತೈದು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ನಳಿನ ಕೋಂ ಬಿ. ಮಂಜುನಾಥ, ಕೋಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಕೋಟೆ, ಶಿರಾ ಟೌನ್. | ಮನೆ | 2118/2083 | ಪಿ. ರಾಜಣ್ಣ ಬಿನ್ ಪುಟ್ಟಶ್ಯಾಮಯ್ಯ ಕೋಟೆ, ಶಿರಾ. | 4.8x9.1 ಮೀ. | ಪೂರ್ವಕ್ಕೆ: ಭೀಮಯ್ಯನ ಮನೆ ಪಶ್ಚಿಮಕ್ಕೆ: ಓಬಳಮ್ಮನ ಸೈಟು ಉತ್ತರಕ್ಕೆ: ಪುಟ್ಟಮಲ್ಲಪ್ಪನ ಮನೆ. ದಕ್ಷಿಣಕ್ಕೆ: ಗಲ್ಲಿ. |

ಮಾರಾಟದ ಮೊತ್ತ ರೂ.35,000/–

ಮಾರಾಟದ ದಿನಾಂಕ:30.11.2007

ನಿಗದಿತ ಮುದ್ರಾಂಕ ಶುಲ್ಕ ರೂ.2,940/–

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1296

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇದರ ನಡವಳಿಗಳು**
**ನಂ.ಡಿಆರ್‌ಟಿ/ಡಿಎಲ್ಎಸ್/7/2001–02/1434, ದಿನಾಂಕ:27ನೇ ಸೆಪ್ಟೆಂಬರ್, 2008**

**ವಿಷಯ:** ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿಯಮಿತ, ಕೋಳಾಲ, ಕೊರಟಗೆರೆ ತಾಲ್ಲೂಕು ಈ ಸಂಘದ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಸಂಖ್ಯೆ ಆದೇಶ ದಿನಾಂಕ:27.10.2001.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ ಸಿಎಲ್ಎಂ/ 2001 ದಿನಾಂಕ:21.11.2001.
3) ಸಮಾಪನಾಧಿಕಾರಿ ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿ, ಕೊರಟಗೆರೆ ಇವರ ಪ್ರಸ್ತಾವನೆ ಪತ್ರ ಸಂಖ್ಯೆ: ಸಅಕೊ/ ರುಣಸಮಾಪನೆ/ ಒಜಿಸಿಎಸ್‌ಕೊ/33/2008–09, ದಿನಾಂಕ:22.07.2008.

**ಪ್ರಸ್ತಾವನೆ:**

ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿಯಮಿತ, ಕೋಳಾಲ, ಕೊರಟಗೆರೆ ತಾಲ್ಲೂಕು ಈ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದ ಕಾರಣದಿಂದ ಉಲ್ಲೇಖಿತ (1)ರ ಈ ಕಛೇರಿ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಕೊರಟಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಉಲ್ಲೇಖಿತ (3)ರ ಪತ್ರದೊಂದಿಗೆ ಸಮಾಪನಾಧಿಕಾರಿಯು ನೋಂದಣಿ ರದ್ಧತಿ ಪ್ರಸ್ತಾವನೆ ಸಲ್ಲಿಸಿ ಸಂಘದ ನೋಂದಣಿ ರದ್ದುಪಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸಮಾಪನಾಧಿಕಾರಿಗಳ ಸಭಾ ನಡವಳಿಕೆ ದಿನಾಂಕ:19.07.2008ರ ವಿಷಯ ಸಂಖ್ಯೆ: (4)ರ ನಿರ್ಣಯದಲ್ಲಿ ಸಂಘದಲ್ಲಿದ್ದ ಚರಾಸ್ತಿಗಳ ಬಹಿರಂಗ ಹರಾಜಿನಿಂದ ಬಂದ ಹಣ ರೂ.5450–00 ಗಳಿಂದ ಆಡಿಟ್ ಫೀ ರೂ.3816–00 ಗಳನ್ನು ಪಾವತಿಸಲು ತೀರ್ಮಾನಿಸಿರುತ್ತಾರೆ. ಸದರಿ ಮೊತ್ತವನ್ನು ಸರ್ಕಾರಕ್ಕೆ ಪಾವತಿಸಿ ಮೂಲ ಚಲನ್ ಪ್ರತಿ ಸಲ್ಲಿಸಿರುತ್ತಾರೆ. ಸಮಾಪನಾಧಿಕಾರಿಯು ಸಮಾಪನಾ ಪ್ರಕ್ರಿಯೆಯ ನಿರ್ವಹಣಾ ವೆಚ್ಚವಾಗಿ ಒಟ್ಟು ರೂ.1659–00 ಗಳನ್ನು ಭರಿಸಿರುತ್ತಾರೆ. ಸಂಘದಲ್ಲಿ ವಸೂಲಿಯಾಗುವಂತಹ ಇತರೆ ಯಾವುದೇ ಆಸ್ತಿಗಳು ಇಲ್ಲದ ಕಾರಣ ಅವುಗಳನ್ನು ನಷ್ಟದ ಖಾತೆಗೆ ವರ್ಗಾಯಿಸಿರುತ್ತಾರೆ. ಇತರೆ ಜವಾಬ್ದಾರಿಗಳನ್ನು ವಿಲೇವಾರಿ ಮಾಡಲು ಸಂಘದಲ್ಲಿ ಯಾವುದೇ ರಹ ಇಲ್ಲದ ಕಾರಣ ಆಸ್ತಿ ಜವಾಬ್ದಾರಿಗಳನ್ನು ಶೂನ್ಯ ಮಾಡಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸಲು ತೀರ್ಮಾನಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಪರಿಗಣಿಸಿ ಸಂಘದ ನೋಂದಣಿಯನ್ನು ರದ್ಧುಪಡಿಸಲು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ನಮೂದಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ಹಾಗೂ ಉಲ್ಲೇಖ (2)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಸಮಾಪನೆಗೊಂಡಿರುವ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಘ ನಿಯಮಿತ, ಕೋಳಾಲ, ಕೊರಟಗೆರೆ ತಾಲ್ಲೂಕು ಈ ಸಂಘದ ನೋಂದಣಿ ಸಂಖ್ಯೆ: ಸನಿ–33/ನೋಂದಣಿ/ ಆರ್‌ಜಿಎನ್/19360/91–92 ದಿನಾಂಕ:27.03.1992 ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಇಂದಿನಿಂದ ಸಂಘವು ಅಸ್ತಿತ್ವದಲ್ಲಿರುವುದಿಲ್ಲ ಮತ್ತು ವಿಸರ್ಜಿತವಾಗಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:27.09.2008 ರಂದು ಹೊರಡಿಸಿದೆ.

ಪಿ.ಆರ್.1140 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಅಮಲ್ಜಾರಿ ಅರ್ಜಿ ಸಂಖ್ಯೆ: 17141: 2005–06**

**ಬಿಡ್‌ದಾರರು:** ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ ಕೋಟೆ, ಶಿರಾ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,<br>ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ ಕೋಟೆ,<br>ಶಿರಾ, ತುಮಕೂರು ಜಿಲ್ಲೆ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.79,000–00, ದಾವಾ ಶುಲ್ಕ ಮುಂದುವರೆದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ

ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 17141/2005–06 ಮೊಬಲಗು ರೂ.1,25,237–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:26.12.2007ಕ್ಕೆ ರೂ.1,91,889–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:26.12.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ, ಕೋಟೆ, ಶಿರಾ, ಇವರಿಗೆ ನಿವೇಶನವನ್ನು ರೂ.75,000/– (ರೂಪಾಯಿಗಳು ಎಪ್ಪತ್ತೈದು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4) (ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸಸಂ. ಸನಿ 33/ ಎಬಿಎನ್/ ಎಸ್.ಸಿ./79/ 2008–09, ದಿನಾಂಕ:4ನೇ ನವೆಂಬರ್, 2008**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6) (ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಶ್ರೀ ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ, ಕೋಟೆ, ಶಿರಾ, ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ತಿರಾಸ್ತಿಗಳನ್ನು ದಿನಾಂಕ:26.12.2007ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ, ಕೋಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ, ಕೋಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.75,000/– ಗಳನ್ನು ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ರಾಗಿಕಲ್ಲು ಗೋರಿ ಭೋವಿ ಕಾಲೋನಿ, ಶಿರಾ ಟೌನ್‌ನಲ್ಲಿರುವ ನಿವೇಶನದ ಖಾತೆ ನಂ.3690/7139/77, ವಿಸ್ತೀರ್ಣ 30x40 ಅಡಿಗಳುಳ್ಳ ನಿವೇಶನ ಈ ನಿವೇಶನಕ್ಕೆ ಚೆಕ್ಕುಬಂದಿ: ಪೂರ್ವಕ್ಕೆ: ಕೃಷ್ಣಪ್ಪ ಮತ್ತು ಸುಮಿತ್ರಬಾಯಿಯವರ ನಿವೇಶನ, ಪಶ್ಚಿಮಕ್ಕೆ: 30 ಅಡಿ ರಸ್ತೆ, ಉತ್ತರಕ್ಕೆ: ಕಲ್ಲುಕೋಟೆ ಜಮೀನು, ದಕ್ಷಿಣಕ್ಕೆ: ನಿವೇಶನದ ನಂ.78.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:** 17141: 2005–06

**ಉಪಸ್ಥಿತರು:** ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ ಕೋಟೆ, ಶಿರಾ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,<br>ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ, ಕೋಟೆ,<br>ಶಿರಾ, ತುಮಕೂರು ಜಿಲ್ಲೆ. |

ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:23.01.2004 ರಂದು ಪಡೆದ ಡಿಕ್ರಿ ನಂ. ಜೆ.ಆರ್.ಬಿ.:ಡಿಸ್:4408:2003–04ರ ಪ್ರಕಾರ ದಿನಾಂಕ:28.02.2006 ರಂದು ಸಿ.ಇ.ಪಿ.ನಂ.17141/2005–06ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀ ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ, ಕೋಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:26.12.2007 ರಂದು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ, ಕೋಟೆ, ಶಿರಾ, ಇವರು ರೂ.75,000/– (ರೂಪಾಯಿಗಳು ಎಪ್ಪತ್ತೈದು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಜಿ.ಎನ್. ಲಲಿತ ಕೋಂ ಮಲ್ಲಿಕಾರ್ಜುನ, ಕೋಟೆ, ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ರಾಗಿಕಲ್ಲು ಗೋರಿ ಭೋವಿ ಕಾಲೋನಿ, ಶಿರಾಟೌನ್. | ನಿವೇಶನ | 3690/7139/77 | ಜಿ.ಎನ್. ಶಿವಕುಮಾರ್ ಬಿನ್ ಜಿ. ನಂಜಪ್ಪ ಕೋಟೆ, ಶಿರಾ | 30x40 ಅಡಿಗಳು | ಪೂರ್ವಕ್ಕೆ: ಕೃಷ್ಣಪ್ಪ ಮತ್ತು ಸುಮಿತ್ರಬಾಯಿ ರವರ ನಿವೇಶನ ಪಶ್ಚಿಮಕ್ಕೆ: 30 ಅಡಿ ರಸ್ತೆ. ಉತ್ತರಕ್ಕೆ: ಕಲ್ಲುಕೋಟೆ ಜಮೀನು. ದಕ್ಷಿಣಕ್ಕೆ: ನಿವೇಶನದ ನಂಬರ್ 78 |

ಮಾರಾಟದ ಮೊತ್ತ ರೂ.75,000/–

ಮಾರಾಟದ ದಿನಾಂಕ:26.12.2007

ನಿಗದಿತ ಮುದ್ರಾಂಕ ಶುಲ್ಕ ರೂ.6,300/–

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1297

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು

## ಅಮಲ್ಜಾರಿ ಅರ್ಜಿ ಸಂಖ್ಯೆ: 59: 2006–07

**ಬಿಡ್‌ದಾರರು:** ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಶ್ರೀ ಮಲ್ಲೇಶಪ್ಪ ಎಸ್.ಪಿ. ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಸಂತೇಪೇಟೆ, ಶಿರಾ, ತುಮಕೂರು ಜಿಲ್ಲೆ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.54,820–00, ದಾವಾ ಶುಲ್ಕ 1120–00 ಮತ್ತು ಮುಂದುವರೆದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು (ನಿಯಮ 441), ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 59/2006–07 ಮೊಬಲಗು ರೂ.59120–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:20.02.2008ಕ್ಕೆ ರೂ.50281–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:20.02.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ, ಇವರಿಗೆ ಮನೆಯನ್ನು ರೂ.42,000/– (ರೂಪಾಯಿಗಳು ನಲವತ್ತೆರಡು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4) (ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸ.ಸಂ. ಸನಿ 33/ ಎಬಿಎನ್/ ಎಸ್.ಪಿ./80/ 2008–09, ದಿನಾಂಕ:4ನೇ ನವೆಂಬರ್, 2008**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6) (ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಶ್ರೀ ಮಲ್ಲೇಶಪ್ಪ ಎಸ್.ಪಿ., ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಸಂತೇಪೇಟೆ, ಶಿರಾ, ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ತಿರಾಸ್ತಿಗಳನ್ನು ದಿನಾಂಕ:20.02.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.42,000/– ಗಳನ್ನು ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತ್ತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಮಲ್ಲೇಶಪ್ಪ ಎಸ್.ಪಿ., ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಸಂತೇಪೇಟೆ ಶಿರಾ ಟೌನ್‌ನಲ್ಲಿರುವ ಮನೆ, ಅಸೆಸ್‌ಮೆಂಟ್ ನಂ.1616/6305/1, 5491/1 ಇದರ ವಿಸ್ತೀರ್ಣ 40x20 ಅಡಿಗಳುಳ್ಳ ಮನೆ. ಈ ಮನೆಗೆ ಚೆಕ್ಕುಬಂದಿ: ಪೂರ್ವಕ್ಕೆ: ಗಾರೇ ಹನುಮಂತಪ್ಪ ಮತ್ತು ತಿಮ್ಮಣ್ಣನವರ ಮನೆ. ಪಶ್ಚಿಮಕ್ಕೆ: ಲಕ್ಷ್ಮಮ್ಮನವರ ನಿವೇಶನ ಮತ್ತು ರಸ್ತೆ, ಉತ್ತರಕ್ಕೆ: ಎ. ಗುಂಡಣ್ಣನವರ ಮನೆ, ದಕ್ಷಿಣಕ್ಕೆ: ಗೋವಿಂದಶೆಟ್ಟಿರವರ ಮನೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**
**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:** 59: 2006–07

**ಉಪಸ್ಥಿತರು:** ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಶ್ರೀಮತಿ ಪುಷ್ಪ ಕೋಂ ಮಂಜುನಾಥ, ಸಂತೇಪೇಟೆ, ಶಿರಾ ಟೌನ್.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,<br>ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಶ್ರೀ ಮಲ್ಲೇಶಪ್ಪ ಎಸ್.ಪಿ., ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಸಂತೇಪೇಟೆ, ಶಿರಾ, ತುಮಕೂರು ಜಿಲ್ಲೆ. |

ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:20.07.2006 ರಂದು ಪಡೆದ ಡಿಕ್ರಿ ನಂ.ಜೆ.ಆರ್.ಡಿ:;ಯು.ಬಿ.ಎಫ್:1323:2006–07ರ ಪ್ರಕಾರ ದಿನಾಂಕ:08.01.2007 ರಂದು ಸಿ.ಇ.ಪಿ.ನಂ.59/2006–07ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀ ಮಲ್ಲೇಶಪ್ಪ ಎಸ್.ಪಿ., ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಸಂತೇಪೇಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ

ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:20.02.2008 ರಂದು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ, ತುಮಕೂರು ಜಿಲ್ಲೆ, ಇವರು ರೂ.42,000/– (ರೂಪಾಯಿಗಳು ನಲವತ್ತೆರಡು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ಪುಷ್ಪ ಕೋಂ ಮಂಜುನಾಥ್, ಸಂತೇಪೇಟೆ, ಶಿರಾ ಟೌನ್ ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಸಂತೇಪೇಟೆ, ಶಿರಾ ಟೌನ್ | ಮನೆ | 1616/ 6305/1, 5491/1 | ಶ್ರೀ ಮಲ್ಲೇಶಪ್ಪ ಎಸ್.ಪಿ. ಬಿನ್ ಲೇಟ್ ಪಟೇಲ್ ಪರ್ವತೇಗೌಡ, ಸಂತೇಪೇಟೆ, ಶಿರಾ. | 40x20 ಅಡಿಗಳು | ಪೂರ್ವಕ್ಕೆ: ಗಾರೇಹನುಮಂತಪ್ಪ ಮತ್ತು ತಿಮ್ಮಣ್ಣನವರ ಮನೆ. ಪಶ್ಚಿಮಕ್ಕೆ: ಲಕ್ಷ್ಮಮ್ಮನವರ ನಿವೇಶನ ಮತ್ತು ರಸ್ತೆ. ಉತ್ತರಕ್ಕೆ: ಎ. ಗುಂಡಣ್ಣನವರ ಮನೆ. ದಕ್ಷಿಣಕ್ಕೆ: ಗೋವಿಂದಶೆಟ್ಟಿ ರವರ ಮನೆ. |

ಮಾರಾಟದ ಮೊತ್ತ ರೂ.42,000/–

ಮಾರಾಟದ ದಿನಾಂಕ:20.02.2008

ನಿಗದಿತ ಮುದ್ರಾಂಕ ಶುಲ್ಕ ರೂ.3,528/–

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1298

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಅಮಲ್ಜಾರಿ ಅರ್ಜಿ ಸಂಖ್ಯೆ: 60: 2003–04**

**ಬಿಡ್‌ದಾರರು:** ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ ಸಂತೇಪೇಟೆ, ಶಿರಾ.

| **ಡಿಕ್ರಿ ಹೋಲ್ಡರ್** | | **ತೀರ್ಪುಋಣಿ** |
|---|---|---|
| ಪ್ರಧಾನ ವ್ಯವಸ್ಥಾಪಕರು, ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ ಗಾಂಧೀನಗರ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. |

**ಪ್ರಸ್ತಾವನೆ:**

ಪ್ರಧಾನ ವ್ಯವಸ್ಥಾಪಕರು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ತೀರ್ಪುಋಣಿಯಿಂದ ವಸೂಲಾಗಬೇಕಾದ ಆಧಾರದ ಸಾಲ ರೂ.2,11,470.00 ಮತ್ತು ಮುಂದುವರೆದ ಬಡ್ಡಿ, ಇತರೆ ಖರ್ಚುಗಳಿಗೆ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವಾ ಹೂಡಿ ಡಿಕ್ರಿ ಪಡೆದು ಅಮಲ್ಜಾರಿ ಅರ್ಜಿ ಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 60/2003–04 ಮೊಬಲಗು ರೂ.249238–00ರ ಪ್ರಕರಣವನ್ನು ಸದರಿ ಬ್ಯಾಂಕಿನ ನಿಯಮ 441 ಮಾರಾಟಾಧಿಕಾರಿಯವರಿಗೆ ಅಮಲ್ಜಾರಿಗೆ ವಹಿಸಲಾಗಿತ್ತು. ಈಗ ದಿನಾಂಕ:27.08.2008ಕ್ಕೆ ರೂ.398600–00 ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ತೀರ್ಪುಋಣಿದಾರರಿಂದ ಬರಬೇಕಾಗಿರುತ್ತದೆ.

ಮಾರಾಟಾಧಿಕಾರಿಗಳು ತೀರ್ಪುಋಣಿಯ ಸ್ಥಿರ ಸ್ವತ್ತುಗಳನ್ನು ದಿನಾಂಕ:27.08.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್ಡುದಾರರಾದ ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ ಸಂತೇಪೇಟೆ, ಶಿರಾ. ಇವರಿಗೆ ಆರ್.ಸಿ.ಸಿ. ಮನೆಯನ್ನು ರೂ.5,01,000/– (ರೂಪಾಯಿಗಳು ಐದು ಲಕ್ಷದ ಒಂದು ಸಾವಿರ ಮಾತ್ರ) ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳ ಒಳಗೆ ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಸಹಕಾರಿ ಕಾಯಿದೆ ನಿಯಮ 38(4)

(ಎ) ರೀತಿ ನಿಯಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಬೇಕಾಗಿದೆ. ಆದುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಸ.ಸಂ. ಸನಿ 33/ ಎಬಿಎನ್/ ಎಸ್.ಸಿ./81/ 2008–09, ದಿನಾಂಕ:4ನೇ ನವೆಂಬರ್, 2008**

ಹೆಚ್.ಡಿ. ಶಿವಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಬಂಧನೆಗಳು 1960ರ ನಿಯಮ 38(6) (ಎ) ಪ್ರಕಾರ ನನಗೆ ದತ್ತವಾಗಿರುವ ಅಧಿಕಾರದ ಮೇರೆಗೆ ಶಿರಾ ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಇದಕ್ಕೆ ತೀರ್ಪುಋಣಿಗಳಾದ ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ, ಗಾಂಧೀನಗರ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ತಿರಾಸ್ತಿಗಳನ್ನು ದಿನಾಂಕ:27.08.2008ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ, ಸಂತೇಪೇಟೆ, ಶಿರಾ ಇವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ, ಸಂತೇಪೇಟೆ, ಶಿರಾ ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಪಾವತಿಸಿದ ರೂ.5,01,000/– ಗಳಲ್ಲಿ ಡಿಕ್ರಿ ಹೋಲ್ಡರ್ ಬ್ಯಾಂಕ್ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿಯ ಸಲುವಾಗಿ ಮಾರಾಟದ ಆದೇಶ ಮಾಡಲ್ಪಟ್ಟಿತೋ ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಶ್ರೀ ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ, ಇವರ ಸಾಲದ ಖಾತೆಗೆ ಜಮ ತೆಗೆದುಕೊಂಡು ಲೆಕ್ಕ ಮಾಡಿಕೊಳ್ಳಲು ಮತ್ತು ಉಳಿದ ಮೊಬಲಗನ್ನು ತೀರ್ಪುಋಣಿದಾರರಿಗೆ ಪಾವತಿಸಲು ಪ್ರಧಾನ ವ್ಯವಸ್ಥಾಪಕರಿಗೆ ಆದೇಶಿಸಿದೆ.

**ಸ್ಥಿರ ಸ್ವತ್ತುಗಳ ವಿವರ**

ಶಿರಾ ಟೌನ್, ಜ್ಯೋತಿನಗರಲ್ಲಿರುವ ಆರ್.ಸಿ.ಸಿ. ಮನೆ, ಅಸೆಸ್‌ಮೆಂಟ್ ನಂ.267/250 ಇದರ ಅಳತೆ ಪೂರ್ವ–ಪಶ್ಚಿಮ 29 (ಇಪ್ಪತ್ತೊಂಬತ್ತು) ಅಡಿ, ಉತ್ತರ–ದಕ್ಷಿಣ:28.6 (ಇಪ್ಪತ್ತೆಂಟೂವರೆ) ಅಡಿಗಳುಳ್ಳ ವಾಸದ ಮನೆ. ಈ ಮನೆಗೆ ಚೆಕ್ಕುಬಂದಿ: ಪೂರ್ವಕ್ಕೆ: 15 ಅಡಿ ರಸ್ತೆ, ಪಶ್ಚಿಮಕ್ಕೆ: ಸುರೇಶ್‌ರವರ 33ನೇ ನಂಬರ್‌ನ ನಿವೇಶನ, ಉತ್ತರಕ್ಕೆ: 37ನೇ ನಂಬರ್ ನಿವೇಶನ, ದಕ್ಷಿಣಕ್ಕೆ: ಗುರುಸಿದ್ದಪ್ಪನವರ ನಿವೇಶನ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಛೇರಿ ನಡವಳಿಕೆಗಳು**

**ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅನ್ವಯ ನೀಡಿದ ಮಾರಾಟ ದೃಢೀಕರಣ ಪತ್ರ**

**ಅಮಲ್ಜಾರಿ ಅರ್ಜಿ ಸಂಖ್ಯೆ:** 60: 2003–04

**ಉಪಸ್ಥಿತರು:** ಶ್ರೀ ಹೆಚ್.ಡಿ. ಶಿವಣ್ಣ, ಬಿ.ಎಸ್ಸಿ., ಬಿ.ಇಡಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ.

**ಬಿಡ್‌ದಾರರು:** ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ ಸಂತೇಪೇಟೆ, ಶಿರಾ.

| ಡಿಕ್ರಿ ಹೋಲ್ಡರ್ | | ತೀರ್ಪುಋಣಿ |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ.,<br>ಶಿರಾ, ತುಮಕೂರು ಜಿಲ್ಲೆ. | **ವಿರುದ್ಧ** | ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ, ಗಾಂಧೀನಗರ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. |

ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ, ತುಮಕೂರು ಜಿಲ್ಲೆ ಇವರು ದಿನಾಂಕ:27.03.2003 ರಂದು ಪಡೆದ ಡಿಕ್ರಿ ನಂ. ಜೆ.ಆರ್.ಬಿ:ಡಿಐಎಸ್:3633:2002–03ರ ಪ್ರಕಾರ ದಿನಾಂಕ:30.08.2003 ರಂದು ಸಿ.ಇ.ಪಿ.ನಂ.60/2003–04ರ ಪ್ರಕಾರ ಅಮಲ್ಜಾರಿ ಪಡೆದು ಡಿಕ್ರಿ ಹೋಲ್ಡರ್ ಬ್ಯಾಂಕಿನ ಮಾರಾಟಾಧಿಕಾರಿಯು ಮೇಲ್ಕಂಡ ತೀರ್ಪುಋಣಿದಾರರಾದ ಶ್ರೀ ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ, ಗಾಂಧೀನಗರ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು, ತುಮಕೂರು ಜಿಲ್ಲೆ. ಇವರು ಡಿಕ್ರಿ ಹೋಲ್ಡರ್ ಬ್ಯಾಂಕಿಗೆ ಆಧಾರ ಮಾಡಿದ್ದ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ:27.08.2008 ರಂದು ದಿ ಟೌನ್ ಕೋ–ಆಪರೇಟಿವ್ ಬ್ಯಾಂಕ್ ಲಿ., ಶಿರಾ ಈ ಬ್ಯಾಂಕಿಗೆ ಬರಬೇಕಾದ ಸುಸ್ತಿಸಾಲದ ವಸೂಲಿ ಬಗೆಗೆ ಬಹಿರಂಗ ಹರಾಜು ನಡೆಸಿರುತ್ತಾರೆ.

ಈ ಬಹಿರಂಗ ಹರಾಜಿನಲ್ಲಿ ತೀರ್ಪುಋಣಿಯ ಸ್ಥಿರ ಸ್ವತ್ತನ್ನು ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ ಸಂತೇಪೇಟೆ, ಶಿರಾ. ಇವರು ರೂ.5,01,000/- (ರೂಪಾಯಿಗಳು ಐದು ಲಕ್ಷ ಒಂದು ಸಾವಿರ ಮಾತ್ರ) ಗಳ ಅತಿ ಹೆಚ್ಚಿನ ಬಿಡ್ ಮೊತ್ತಕ್ಕೆ ಕೊಂಡಿರುತ್ತಾರೆ ಎಂದು ಈ ಮೂಲಕ ದೃಢೀಕರಿಸಿದೆ. ಆದ್ದರಿಂದ ಈ ಸ್ಥಿರಾಸ್ತಿಯ ಹರಾಜನ್ನು ಬಿಡ್‌ದಾರರಾದ ಶ್ರೀಮತಿ ರತ್ನಮ್ಮ ಕೋಂ ಭಾಸ್ಕರಪ್ಪ ಸಂತೇಪೇಟೆ, ಶಿರಾ. ಇವರ ಹೆಸರಿಗೆ ಸ್ಥಿರೀಕರಣಗೊಳಿಸಿದೆ.

**ಸ್ಥಿರಾಸ್ತಿಯ ವಿವರ**

| ಕ್ರ. ಸಂ. | ಗ್ರಾಮ ಮತ್ತು ತಾಲ್ಲೂಕು | ಸ್ಥಿರ ಸ್ವತ್ತುಗಳ ವಿವರ ತರಹೆ | ಖಾನೇಷು ಮಾರಿ ನಂ. | ಖಾತೆದಾರನ ಹೆಸರು | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|---|
| 1. | ಜ್ಯೋತಿನಗರ, ಶಿರಾ ಟೌನ್. | ಆರ್.ಸಿ.ಸಿ. ಮನೆ | 267/250 | ಎಸ್. ವಸಂತರಾಜು ಬಿನ್ ಡಿ. ಸಿದ್ದಣ್ಣ ಗಾಂಧೀನಗರ, ಹುಳಿಯಾರು, ಚಿಕ್ಕನಾಯಕನಹಳ್ಳಿ ತಾಲ್ಲೂಕು. | 29x28.6 ಅಡಿಗಳು | ಪೂರ್ವಕ್ಕೆ: 15 ಅಡಿ ರಸ್ತೆ. ಪಶ್ಚಿಮಕ್ಕೆ: ಸುರೇಶ್‌ರವರ 33ನೇ ನಂಬರ್ ನಿವೇಶನ. ಉತ್ತರಕ್ಕೆ: 37ನೇ ನಂಬರಿನ ನಿವೇಶನ. ದಕ್ಷಿಣಕ್ಕೆ: ಗುರುಸಿದ್ದಪ್ಪನವರ ನಿವೇಶನ. |

ಮಾರಾಟದ ಮೊತ್ತ ರೂ.5,01,000/-

ಮಾರಾಟದ ದಿನಾಂಕ:27.08.2008

ನಿಗದಿತ ಮುದ್ರಾಂಕ ಶುಲ್ಕ ರೂ.42,084/-

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿ ಮೊಹರಿನೊಂದಿಗೆ ಈ ದಿನ 2008ನೇ ಇಸವಿ ನವೆಂಬರ್ ಮಾಹೆ 04 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

ಪಿ.ಆರ್.1299

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಗುಲ್ಬರ್ಗಾ**

**ಸಂಖ್ಯೆ: ಎ4: ಅಗುಪ್ರ: ಸಾಗುವಾನಿ: ಲಾರಿ ADY-4578 ಸಿಆರ್-/08-09/1433, ದಿನಾಂಕ:30ನೇ ಸೆಪ್ಟೆಂಬರ್, 2008**

ನಿರೂಪಣಾಧಿಕಾರಿ ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ.
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ಅರಣ್ಯ ವಿಭಾಗ, ಗುಲ್ಬರ್ಗಾ.

ಫಿರ್ಯಾಧಿದಾರರು ವಲಯ ಅರಣ್ಯ ಅಧಿಕಾರಿ, ಪ್ರಾದೇಶಿಕ ವಲಯ, ಚಿಂಚೋಳಿ.

ಅರ್ಜಿದಾರರು ಶ್ರೀ ಹಣಮಂತ ತಂದೆ ಸಣ್ಣ ನರಸಣ್ಣ ಕನಕಟ್, ಸಾ: ಶಾದಿಪೂರ ತಾ: ಚಿಂಚೋಳಿ.

**ಪ್ರಕರಣ ಹಿನ್ನೆಲೆ:**

ದಿನಾಂಕ:04.04.2007ರಂದು ಚಿಂಚೋಳಿ ವಲಯದ ಸಿಬ್ಬಂದಿಯವರು ವನಪಾಲಕರಾದ ಶ್ರೀ ಮಹ್ಮದಮುನೀರ (2) ಅರಣ್ಯ ರಕ್ಷಕ ಶ್ರೀ ಹಣಮಂತರಾಯ ದೇಗಾಂವ, ರಾಘವೇಂದ್ರ ಬಿ. ಗಾಯಕವಾಡ ಇವರುಗಳೆಲ್ಲರು ಖಚಿತ ಮಾಹಿತಿ ಮೇರೆಗೆ ಕುಂಚಾವರಂ ಕ್ರಾಸ್ ಹತ್ತಿರ ಕಾದು ಕುಳಿತಾಗ ಸುಮಾರು 6.00 ಗಂಟೆ ಸಂಜೆ ಹೊತ್ತಿನಲ್ಲಿ ಶಾದಿಪೂರದಿಂದ ಗುಲಬರ್ಗಾ ಕಡೆಗೆ ಯಾವುದು ಒಂದು ಬಿಳಿ ಬಣ್ಣ ಕಾರು ಬರುತ್ತಿರುವುದು ಕಂಡು ಬಂತು. ಬರುತ್ತಿರುವ ಕಾರನ್ನು ನಿಲ್ಲಿಸಲು ತಿಳಿಸಿದಾಗ ಸದರಿ ಕಾರನ್ನು ನಿಲ್ಲಿಸಿ ಅದರಲ್ಲಿದ್ದವರು ಓಡಲಾರಂಭಿಸಿದರು. ಅದನ್ನು ಓಡುತ್ತಿರುವ ಮನುಷ್ಯರನ್ನು ಗುರುತು ಹಚ್ಚಲಾಯಿತು. ಅವರು ಶಾದಿಪೂರ ಗ್ರಾಮದ ಹಣಮಂತ ತಂದೆ ಸಣ್ಣ ನರಸಣ್ಣ ಕನಕಟ್ ಎಂಬುವ ಖಚಿತಪಡಿಸಿಕೊಂಡು ಸದರಿಯವರು ತಂದಿದ್ದ ಕಾರನ್ನು ಪರಿಶೀಲಿಸಲಾಗಿ ಕಾರು ಅಂಬಾಸಿಡರ್ ಕಾರಾಗಿದ್ದು ಅದರ ಸಂಖ್ಯೆ: ADY-4578 ಇದ್ದು (ಬಿಳಿ ಬಣ್ಣದ್ದು) ತದನಂತರ ಡಿಕ್ಕಿಯನ್ನು ತೆಗೆದು ನೋಡಲಾಗಿ ಅದರಲ್ಲಿ 15 ಸೈಜಾಗಿ ಕತ್ತರಿಸಿದ ಸಾಗುವಾನಿ ಕಟ್ಟಿಗೆ ತುಂಡುಗಳು ಇದ್ದದು ಕಂಡು ಬಂತು. ಸದರಿ ಆರೋಪಿತನು ಕಾರನ್ನು ಅಲ್ಲಿ ಬಿಟ್ಟು ಓಡಿ ಹೋಗಿರುತ್ತಾರೆ. ಸದರಿ ಸ್ವತ್ತುಗಳನ್ನು ಪರಿಶೀಲಿಸಲಾಗಿ ಅವುಗಳ ಮೇಲೆ ಇಲಾಖೆ ಛಾಪಾ ಗುರುತು ವಗೈರ ಇಲ್ಲದೆ ಇರುವುದು ಕಂಡು ಬಂದಿದ್ದರಿಂದ ಅಕ್ರಮವಾಗಿ ಸಾಗಿಸುತ್ತಿರುವುದು ದೃಢಪಟ್ಟಿರುವ ಕಾರಣ ಸದರಿ ಸ್ಥಳದಲ್ಲಿ ಪಂಚನಾಮೆ ಜರುಗಿಸಿ ಅರಣ್ಯ ಮೊಕದ್ದಮೆ ಸಂಖ್ಯೆ: 2/2007-08 ನ್ನು ದಾಖಲೆ ಮಾಡಿರುತ್ತಾರೆ ಹಾಗೂ ಸದರಿ ಮೊಕದ್ದಮೆಯನ್ನು ಅರಣ್ಯ ಕಾಯಿದೆ 1963 ಕಲಂ 24(ಇ) 62 ಮತ್ತು 71ಎ ರಡಿಯಲ್ಲಿ ದಾಖಲು ಮಾಡಿ ನ್ಯಾಯಾಲಯಕ್ಕೆ ಮುಂದಿನ ಕ್ರಮಕ್ಕಾಗಿ ಹಾಜರು ಪಡಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71ಎ ಪ್ರಕಾರವಾಗಿ ಕ್ರಮ ಜರುಗಿಸಿ ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶದವರೆಗೆ ವಲಯ ಅರಣ್ಯ ಅಧಿಕಾರಿ, ಚಿಂಚೋಳಿ ಇವರ ವಶಕ್ಕೆ ನೀಡಲಾಗಿರುತ್ತದೆ. ದಿನಾಂಕ:23.06.2007 ರಿಂದ

14.08.2008 ರವರೆಗೆ ಹಲವಾರು ದಿನಾಂಕಗಳಂದು ಅರ್ಜಿದಾರರಿಗೆ (ಆರೋಪಿತರಿಗೆ) ಹಾಗೂ ಕಾರಿನ ನೊಂದಾಯಿತ ಮಾಲೀಕರಿಗೆ ಸಮನ್ಸ್ ಜಾರಿ ಮಾಡಲಾಗಿ ಅವರಾಗಲಿ ಅವರ ಪರ ವಕೀಲರಾಗಲಿ ಯಾರೊಬ್ಬರು ಈ ಪ್ರಕರಣದಲ್ಲಿ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಸದರಿ ವಾಹನದ ದಾಖಲಾತಿಗಳನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿ, ಹೈದ್ರಾಬಾದ್‌ದಿಂದ ತರಿಸಿಕೊಳ್ಳಲಾಯಿತು.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ:23.06.2007 ರಿಂದ 14.08.2008ರ ವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನ ಮಾಲೀಕರ ಹೇಳಿಕೆಗಳನ್ನು Asst. Director of Public Prosecutor ಗುಲಬರ್ಗಾ ರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ನಡೆಸಲು ಯಾರೊಬ್ಬರು (ಆರೋಪಿತರ ಪರ) ಹಾಜರಾಗದೇ ಇದ್ದಿದರಿಂದ, ಸದರಿ ಪ್ರಕರಣದ ಕಾರಿನ ಬಗ್ಗೆ ಅವರಿಗೆ ಕಾಳಜಿ ಇಲ್ಲದು ಕಂಡು ಬಂದಿತು.

ಈ ಪ್ರಕರಣದಲ್ಲಿ ವಾಸ್ತಾವಾಂಶ ಮತ್ತು ಕಾನೂನು ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ಮೇಲೆ ಗಮನಿಸಿ, ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1) ಅರ್ಜಿದಾರರ ಕಾರು ನಂ. ADY-4578 ರಲ್ಲಿ 15 ಸಾಗುವಾನಿ ತುಂಡುಗಳು ದಿನಾಂಕ:04.04.2007ರಂದು ಕಾನೂನು ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ಈ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಉಲ್ಲಂಘನೆ ನಿಯಮ ಉಲ್ಲಂಘಿಸಲಾಗಿದೆಯೇ?

2) ಕರ್ನಾಟಕ ಅರಣ್ಯ ಕಾಯ್ದೆ 71(ಬಿ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟಿಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನದ ಮಾಲೀಕರು ಅಥವಾ ಕೆಲಸಗಾರರು ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ವಾಹನ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆ ಉಪಯೋಗಿಸದಂತೆ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ಪ್ರಕರಣದಲ್ಲಿ ಫಿರ್ಯಾದುದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯಿದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?

5) ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

6) ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಒಂದನೇ ಅಂಶಕ್ಕೆ ಹೌದು ಎಂತಲೂ

2) ಎರಡನೇ ಅಂಶಕ್ಕೆ ಹೌದು ಎಂತಲೂ

3) ಮೂರನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮತ್ತು ಮೂರನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

4) ನಾಲ್ಕನೇ ಅಂಶಕ್ಕೆ ಹೌದು ಎಂತಲೂ

5) ಐದನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನಂತೆ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

ಕಾರಣಗಳು:

**ಅಂಶ–1:**

ದಿನಾಂಕ:04.04.2007 ರಂದು ಚಿಂಚೋಳಿ ವಲಯದ ಸಿಬ್ಬಂದಿಯವರು ಕುಂಚಾವರಂ ಶಾಖೆಯ ಅರಣ್ಯ ಪ್ರದೇಶದಲ್ಲಿ ಕಾದು ಕುಳಿತಾಗ ಸುಮಾರು 6.00 ಗಂಟೆ ಸಂಜೆ ಹೊತ್ತಿನಲ್ಲಿ ಶಾದಿಪೂರದಿಂದ ಗುಲಬರ್ಗಾ ಕಡೆಗೆ ಯಾವುದೂ ಒಂದು ಬಿಳಿ ಬಣ್ಣದ ಕಾರು ಬರುತ್ತಿರುವುದು ಕಂಡು ಬಂತು ಬರುತ್ತಿರುವ ಕಾರನ್ನು ನಿಲ್ಲಿಸಲು ತಿಳಿಸಿದಾಗ ಸದರಿ ಕಾರನ್ನು ನಿಲ್ಲಿಸಿ ಅದರಲ್ಲಿದ್ದವರು ಓಡಲಾರಂಭಿಸಿದರೂ ಅದನ್ನು ಓಡುತ್ತಿರುವ ಮನುಷ್ಯನನ್ನು ಗುರುತು ಹಚ್ಚಲಾಯಿತು. ಶ್ರೀ ಹಣಮಂತ ತಂದೆ ಸಣ್ಣ ನರಸಣ್ಣ ಕನಕಟ್ ಎಂಬುವುದು ಖಚಿತಪಡಿಸಿಕೊಂಡು, ಸದರಿಯವರು ತಂದಿದ್ದ ಕಾರನ್ನು ಪರಿಶೀಲಿಸಲಾಗಿ ಕಾರು ಅಂಬಾಸಿಡರ್ ಕಾರು ಆಗಿದ್ದು ಅವರು ಸಂಖ್ಯೆ: ADY-4578 ಇದ್ದು (ಬಿಳಿ ಬಣ್ಣದ) ತದ ನಂತರ ಡಿಕ್ಕಿಯನ್ನು ತೆಗೆದು ನೋಡಲಾಗಿ ಅದರಲ್ಲಿ 15 ಸೈಜಾಗಿ ಕತ್ತರಿಸಿದ ಸಾಗುವಾನಿ ಕಟ್ಟಿಗೆ ತುಂಡುಗಳು ಇದ್ದದ್ದು ಕಂಡುಬಂತು. ಸದರಿ ಸ್ವತ್ತು

ವಶಪಡಿಸಿಕೊಂಡು ವಿವಾದಗಳಿಂದ ವಾಹನ ಮಾಲೀಕರಾಗಲಿ ಇಲ್ಲವೆ ವಾಹನ ಉಸ್ತುವಾರಿದಾರರಾಗಲೀ ವಾಹನದ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೆ, ಬದಲಾಗಿ ತಮಗೆ ಗೊತ್ತಿದ್ದ ಈ ವ್ಯಕ್ತಿಯ ಈ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದೆ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಎ. ರಾಧಾದೇವಿ, ಭಾ.ಅ.ಸೇ. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಗುಲಬರ್ಗಾ ವಿಭಾಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ನೊಂದಣಿ ಸಂ: ADY-4578 (ಇಂಜಿನ್ ನಂ.15092302–ಬಿ ಚಾಸ್ಸಿ ನಂ. IIII0050) 15 ಸಾಗುವಾನಿ ತುಂಡುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಿದ್ದರೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನಾಂಕ:26.09.2008 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಎ. ರಾಧಾದೇವಿ, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿ, ಪ್ರಾದೇಶಿಕ ಅರಣ್ಯ ವಿಭಾಗ, ಗುಲಬರ್ಗಾ.

ಪಿ.ಆರ್.1139

**ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ**

**ಅಧಿಸೂಚನೆ**

**ಸಂಖ್ಯೆ: ಜಿತಸಂ/ತರಬೇತಿ/ ವಿವ–59/2008–09, ದಿನಾಂಕ:22ನೇ ಅಕ್ಟೋಬರ್, 2008**

**ವಿಷಯ:** ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ಕಲಂ–4(1) (ಬಿ) ಅನುಸಾರ ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರಕ್ಕೆ ಸಂಬಂಧಿಸಿದಂತೆ ದಿನಾಂಕ:01.04.2008ರಲ್ಲಿದ್ದಂತೆ ಕಛೇರಿಯ ಮಾಹಿತಿಯನ್ನು ಕಾಲೋಚಿತಗೊಳಿಸಿ ಪ್ರಕಟಿಸುವ ಬಗ್ಗೆ.

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಹಕ್ಕು ಅಧಿನಿಯಮ–2005ರ (Central Act 22 of 2005) Section 5(1) 5(2) 19(1) ರಲ್ಲಿ ಅಧಿಕಾರವನ್ನು ಚಲಾಯಿಸಿ ಜಿಲ್ಲಾ ತರಬೇತಿ ಸಂಸ್ಥೆ ವಿಜಾಪೂರ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು, ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಅನುಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಇಲಾಖಾ ಮುಖ್ಯಸ್ಥರಾದ ಮಹಾ ನಿರ್ದೇಶಕರು, ತರಬೇತಿ, ಆಡಳಿತ ತರಬೇತಿ ಸಂಸ್ಥೆ, ಮೈಸೂರುರವರು ಈ ಕೆಳಕಂಡಂತೆ ನೇಮಿಸಿರುತ್ತಾರೆ.

| ಕ್ರಮ ಸಂಖ್ಯೆ | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1) 5(2)ರ ಪ್ರಕಾರ | | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1) ಪ್ರಕಾರ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| | | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | |
| 1) | ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ | ಪ್ರಾಚಾರ್ಯರು | ಉಪ ಪ್ರಾಚಾರ್ಯರು | ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು. |

ಕೇಂದ್ರ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯಿದೆ ಇದಾಗಿದ್ದು, ಸದರಿ ಕಾಯ್ದೆಯ ಕಲಂ 4(1)ರಡಿ ಒಟ್ಟು 16 ವಿವಿಧ ಅಂಶಗಳನ್ನೊಳಗೊಂಡ ಒಂದು ಕೈಪಿಡಿ ತಯಾರಿಸಬೇಕಾಗಿದ್ದು, ಈ ಕಛೇರಿಯ ಕಾರ್ಯಚಟುವಟಿಕೆಗಳ ಮಾಹಿತಿ ಈ ಕೆಳಕಂಡಂತಿರುತ್ತದೆ.

ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪುರ ಮಾಹಿತಿ ಪಡೆಯಲು ಹಕ್ಕು 2005ರ ಅಧಿನಿಯಮದ ಅಧ್ಯಾಯ–ii ರ ಪರಿಚ್ಛೇದ (Section) 4(1) (B) (i) ರನ್ವಯ

1) ಇಲಾಖೆಯ ಪರಿಚಯ ಹಾಗೂ ಕಾರ್ಯಚಟುವಟಿಕೆಗಳನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

ಸರ್ಕಾರಿ ನೌಕರರು ಸರ್ಕಾರದ ಬಹು ದೊಡ್ಡ ಆಸ್ತಿಯಾಗಿದ್ದು, ಸರ್ಕಾರದ ಆಡಳಿತದ ಎಲ್ಲಾ ಕೆಲಸ ಕಾರ್ಯಗಳಲ್ಲಿ ಸರ್ಕಾರಿ ನೌಕರರು ಖಾಯಂ ಮತ್ತು ನಿಷ್ಪಕ್ಷಪಾತವಾದ ಸಾಧನ. ಸರ್ಕಾರಿ ನೌಕರರ ದಕ್ಷತೆ ಮತ್ತು ಪ್ರಾಮಾಣಿಕತೆಯನ್ನು ಸಂರಕ್ಷಿಸುವದು ತಮ್ಮ ಕರ್ತವ್ಯವೆಂದು ಸರ್ಕಾರಗಳು ಯಾವಾಗಲೂ ಭಾವಿಸಿದೆ. ಸರ್ಕಾರದ ಮಹತ್ತರ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುವಂತೆ ಮಾಡುವಲ್ಲಿ ಸರ್ಕಾರಿ ನೌಕರರಿಗೆ ತರಬೇತಿ ನೀಡುವುದು ಗಣನೀಯವಾದ ಒಂದು ಸರ್ಕಾರದ ನೀತಿ.

ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ತರಬೇತಿ ನೀತಿಯನ್ನು ರೂಪಿಸಲಾಗಿದೆ.

(1) ರಾಜ್ಯ ತರಬೇತಿ ನೀತಿಗೆ ಅನುಗುಣವಾಗಿ ಜಿಲ್ಲೆಯಲ್ಲಿನ ವಿವಿಧ ಇಲಾಖೆಗಳಲ್ಲಿನ ಗ್ರೂಪ್ "ಸಿ" ಮತ್ತು ಗ್ರೂಪ್ "ಡಿ" ನೌಕರರಿಗೆ ಆಡಳಿತಾತ್ಮಕ ವಿಷಯಗಳು ಮತ್ತು ಅಭಿವೃದ್ಧಿ ವಿಷಯಗಳಲ್ಲಿ ತರಬೇತಿ ನೀಡಲು ಜಿಲ್ಲಾ ತರಬೇತಿ ಸಂಸ್ಥೆಯನ್ನು ಸ್ಥಾಪಿಸಲಾಗಿರುತ್ತದೆ. ಸಂಸ್ಥೆ ವಿಜಾಪೂರ, ವಿಜಾಪೂರ ಮತ್ತು ಬಾಗಲಕೋಟೆ ಎರಡೂ ಜಿಲ್ಲೆಯನ್ನು ಒಳಗೊಂಡಿದೆ.

(ಎ) ಜಿಲ್ಲಾ ತರಬೇತಿ ಜಿಲ್ಲೆಯಾದ್ಯಂತ ಇರುವ ಎಲ್ಲಾ ರಾಜ್ಯ ಸರ್ಕಾರಿ ಕಛೇರಿಗಳಲ್ಲಿನ ಗ್ರೂಪ್–ಸಿ ಮತ್ತು ಗ್ರೂಪ್–ಡಿ ನೌಕರರಿಗೆ ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸುವ ಕಾರ್ಯ ನಿರ್ವಹಿಸುತ್ತಿದೆ.

(ಬಿ) ಜಿಲ್ಲೆಯ ವಿವಿಧ ಇಲಾಖೆಗಳ ಅವಶ್ಯಕತೆಗಳಿಗನುಸಾರವಾಗಿ ಆರ್ಥಿಕ ವರ್ಷಕ್ಕೆ ಹೊಂದುವಂತೆ ವಾರ್ಷಿಕ ತರಬೇತಿ ಕ್ಯಾಲೆಂಡರನ್ನು ರೂಪಿಸಿ, ಜಿಲ್ಲಾ ತರಬೇತಿ ಸಂಸ್ಥೆಯ ಮೇಲ್ವಿಚಾರಣೆಗಾಗಿ ಸರ್ಕಾರದಿಂದ ರಚಿಸಲಾಗಿರುವ ಜಿಲ್ಲಾಧಿಕಾರಿಗಳು, ಅಧ್ಯಕ್ಷರಾಗಿರುವ ಆಡಳಿತ ಕಮಿಟಿಯಿಂದ ಅನುಮೋದನೆ ಪಡೆದುಕೊಳ್ಳಲಾಗುವುದು.

(ಸಿ) ಸದರಿ ವಾರ್ಷಿಕ ತರಬೇತಿ ಕ್ಯಾಲೆಂಡರಂತೆ ವರ್ಷದ ಅವಧಿಯಲ್ಲಿ ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

(2) ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ಬೋಧಕ ವರ್ಗದಲ್ಲಿ ಒಬ್ಬ ಪ್ರಾಚಾರ್ಯರು, ಒಬ್ಬ ಉಪ–ಪ್ರಾಚಾರ್ಯರು, ಎರಡು ಬೋಧಕರ ಹುದ್ದೆಗಳಿದ್ದು, ಇವರುಗಳು ಮತ್ತು ಅಗತ್ಯವಿರುವೆಡೆ ವಿವಿಧ ಇಲಾಖಾ ಅಧಿಕಾರಿಗಳು, ನಿವೃತ್ತ ಅಧಿಕಾರಿಗಳು, ಸ್ವಯಂ ಸೇವಾ ಸಂಸ್ಥೆಗಳ ಮುಖ್ಯಸ್ಥರು ಮುಂತಾದ ವಿಷಯ ಪರಿಣಿತರನ್ನು ಅತಿಥಿ ಉಪನ್ಯಾಸಕರನ್ನಾಗಿ ಆಹ್ವಾನಿಸಿ, ಅವರ ಸಹಕಾರ ಪಡೆದು, ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಗುವುದು.

(3) ಕಛೇರಿ ಸಹಾಯಕ್ಕಾಗಿ ಕಛೇರಿಯಲ್ಲಿ ಒಬ್ಬರು ಪ್ರಥಮ ದರ್ಜೆ ಸಹಾಯಕರು, ಒಬ್ಬ ದ್ವಿತೀಯ ದರ್ಜೆ ಸಹಾಯಕರು, ಇಬ್ಬರು ಬೆರಳಚ್ಚುಗಾರರು ಮತ್ತು ಮೂವರು ಜವಾನರ ಹುದ್ದೆ ಇರುತ್ತವೆ.

(4) ಈ ಕಛೇರಿಯ ವ್ಯಾಪ್ತಿಯಲ್ಲಿ ಸರ್ಕಾರಿ ನೌಕರರು ಮಾತ್ರ ಬರುವವರಿದ್ದು ಇತರೆ ಸಾರ್ವಜನಿಕರ ಸಂಪರ್ಕದ ವ್ಯಾಪ್ತಿ ಇರುವುದಿಲ್ಲ.

(5) ಆದರೂ ಕೆಲವು ಸಾರ್ವಜನಿಕರು, ಸರ್ಕಾರಿ ನೌಕರರ ಕುಟುಂಬ ವರ್ಗದ ಸದಸ್ಯರು, ಹಲವು ನಿಯಮಗಳ ಮಾಹಿತಿಗಾಗಿ ಸಂಪರ್ಕಿಸುವ ಸಂದರ್ಭಗಳು ಬರುತ್ತವೆ. ಅವರಿಗೆ ಅವರು ವಿನಂತಿಸಿದ ವಿಷಯಗಳ ಅಗತ್ಯ ಮಾಹಿತಿ ನೀಡುತ್ತಾ ಬರಲಾಗಿದೆ.

(6) ಸರ್ಕಾರಿ ನೌಕರರು ಹಾಗೂ ಇತರೆ ಯಾವುದೇ ಸಾರ್ವಜನಿಕರು, ಈ ಕಛೇರಿಯ ಮುಖ್ಯಸ್ಥರಾದ ಪ್ರಾಚಾರ್ಯರನ್ನು ಸಂಪರ್ಕಿಸಿ ಮಾಹಿತಿ ಪಡೆಯಬಹುದಾಗಿರುತ್ತದೆ.

(ii) ಸಂಸ್ಥೆಯ ಅಧಿಕಾರಿಗಳ ಮತ್ತು ಸಿಬ್ಬಂದಿಗಳ ಅಧಿಕಾರ ಮತ್ತು ಜವಾಬ್ದಾರಿಗಳು

| | |
|---|---|
| ಪ್ರಾಚಾರ್ಯರು | ಇವರು ಕಛೇರಿ ಮುಖ್ಯಸ್ಥರಾಗಿದ್ದು, ಕಛೇರಿಯ ಆಡಳಿತ ಮೇಲ್ವಿಚಾರಣೆ ಜೊತೆಗೆ ಸಂಸ್ಥೆಯಲ್ಲಿ ವರ್ಷಾದ್ಯಂತ ಏರ್ಪಡಿಸಲಾಗಿರುವ ವಿವಿಧ ತರಬೇತಿಗಳ ಸಂಪೂರ್ಣ ನಿಯಂತ್ರಣ ಹಾಗೂ ಮೇಲ್ವಿಚಾರಣೆ ಹಣಕಾಸಿನ ವಿಷಯಕ್ಕೆ ಸಂಬಂಧಪಟ್ಟ ಕರ್ತವ್ಯ ಮತ್ತು ಜವಾಬ್ದಾರಿಗಳು, ಸಭೆಗಳಲ್ಲಿ ಭಾಗವಹಿಸುವದು, ಬಿಡುವಿದ್ದಾಗ/ ಅಗತ್ಯವಾದಾಗ ವಿವಿಧ ಆಡಳಿತಾತ್ಮಕ/ ಇತರ ವಿಷಯಗಳ ತರಬೇತಿಗಳಲ್ಲಿ ಉಪನ್ಯಾಸ ನೀಡುವದು. |
| ಉಪ ಪ್ರಾಚಾರ್ಯರು | ತರಬೇತಿ ಶಿಬಿರಗಳ ಸಮನ್ವಯಾಧಿಕಾರಿಯಾಗಿ ಕೆಲಸ ನಿರ್ವಹಿಸುವದು ತರಬೇತಿಗೆ ಸಾಕಷ್ಟು ಸಂಖ್ಯೆಯಲ್ಲಿ ಶಿಕ್ಷಣಾರ್ಥಿಗಳು ಹಾಜರಾಗುವ ಬಗ್ಗೆ ಕ್ರಮ ತರಬೇತಿ ಪಠ್ಯ, ಡೆ–ಟು–ಡೇ ಶೆಡ್ಯೂಲ್ ತಯಾರಿಸುವದು, ಅನುಮೋದನೆ ಪಡೆದುಕೊಳ್ಳುವದು, ಅತಿಥಿ ಉಪನ್ಯಾಸಕರಿಗೆ ಆಹ್ವಾನ ನೀಡುವದು, ತರಬೇತಿ ಶಿಬಿರದ ಮೌಲ್ಯಮಾಪನ ಮಾಡಿಸುವದು ಹಾಗೂ ತರಬೇತಿಯ ಅಂತಿಮ ವರದಿ ಕಳಿಸಿಕೊಡುವದು.<br>ಪ್ರಾಚಾರ್ಯರ ಅನುಪಸ್ಥಿತಿಯಲ್ಲಿ ಕಛೇರಿಯ ಚಾಲ್ತಿ ಕೆಲಸ ನಿರ್ವಹಣೆ, ಇತರೆ ಕೆಲಸಗಳು ಪ್ರಾಚಾರ್ಯರ ಸೂಚನೆಯಂತೆ ಆಡಳಿತಾತ್ಮಕ/ ಅಭಿವೃದ್ಧಿ ವಿಷಯಗಳ ತರಬೇತಿಗಳಲ್ಲಿ ಉಪನ್ಯಾಸ ನೀಡುವದು. |

| | |
|---|---|
| ಬೋಧಕರು–1 | ತರಬೇತಿ ಶಿಬಿರಗಳ ಸಮನ್ವಯಾಧಿಕಾರಿಯಾಗಿ ಕೆಲಸ ನಿರ್ವಹಿಸುವದು. ತರಬೇತಿ ಶಿಬಿರದ ಬಗ್ಗೆ ನಿಯೋಜನೆ ಇತ್ಯಾದಿಗಳ ಪತ್ರ ವ್ಯವಹಾರ, ಸಾಕಷ್ಟು ಸಂಖ್ಯೆಯಲ್ಲಿ ಶಿಕ್ಷಣಾರ್ಥಿಗಳು ಹಾಜರಾಗುವ ಬಗ್ಗೆ ಕ್ರಮ, ತರಬೇತಿ ಪಠ್ಯ ತಯಾರಿಸಿ ಅನುಮೋದನೆ ಪಡೆದುಕೊಳ್ಳುವದು, ಡೇ–ಟು–ಡೇ ಶೆಡ್ಯೂಲ್ ತಯಾರಿಸುವದು. ಅತಿಥಿ ಉಪನ್ಯಾಸಕರ ಆಹ್ವಾನ ಹಾಗೂ ತರಬೇತಿ ಶಿಬಿರದ ಮೌಲ್ಯಮಾಪನ ಮಾಡಿಸುವದು. ಆಡಳಿತಾತ್ಮಕ/ ಅಭಿವೃದ್ಧಿ ವಿಷಯಗಳ ತರಬೇತಿಯಲ್ಲಿ ಉಪನ್ಯಾಸ ನೀಡುವದು. ಪ್ರಾಚಾರ್ಯರು ಕಾಲ ಕಾಲಕ್ಕೆ ವಹಿಸುವ ಕೆಲಸ ನಿರ್ವಹಿಸುವದು. ಸಿಬ್ಬಂದಿ ಶಾಖೆ ಮೇಲ್ವಿಚಾರಣೆ. |
| ಬೋಧಕರು–2 | ತರಬೇತಿ ಶಿಬಿರಗಳ ಸಮನ್ವಯಾಧಿಕಾರಿಯಾಗಿ ಕೆಲಸ ನಿರ್ವಹಿಸುವದು. ತರಬೇತಿ ಶಿಬಿರದ ಬಗ್ಗೆ ನಿಯೋಜನೆ ಇತ್ಯಾದಿಗಳ ಪತ್ರ ವ್ಯವಹಾರ, ಸಾಕಷ್ಟು ಸಂಖ್ಯೆಯಲ್ಲಿ ಶಿಕ್ಷಣಾರ್ಥಿಗಳು ಹಾಜರಾಗುವ ಬಗ್ಗೆ ಕ್ರಮ, ತರಬೇತಿ ಪಠ್ಯ ತಯಾರಿಸಿ ಅನುಮೋದನೆ ಪಡೆದುಕೊಳ್ಳುವದು, ಡೇ–ಟು–ಡೇ ಶೆಡ್ಯೂಲ್ ತಯಾರಿಸುವದು. ಅತಿಥಿ ಉಪನ್ಯಾಸಕರ ಆಹ್ವಾನ ಹಾಗೂ ತರಬೇತಿ ಶಿಬಿರದ ಮೌಲ್ಯಮಾಪನ ಮಾಡಿಸುವದು. ಆಡಳಿತಾತ್ಮಕ/ ಅಭಿವೃದ್ಧಿ ವಿಷಯಗಳ ತರಬೇತಿಯಲ್ಲಿ ಉಪನ್ಯಾಸ ನೀಡುವದು. ಗ್ರಂಥಾಲಯ ನಿರ್ವಹಣೆ, ಪ್ರಾಚಾರ್ಯರು ಕಾಲ ಕಾಲಕ್ಕೆ ವಹಿಸುವ ಕೆಲಸ ನಿರ್ವಹಿಸುವದು. ವಸತಿಗೃಹದ ಮೇಲ್ವಿಚಾರಣೆ (ವಸತಿಪಾಲಕರು) ತರಬೇತಿ ಶಾಖೆಯ ಮೇಲ್ವಿಚಾರಣೆ. |
| ಪ್ರಥಮ ದರ್ಜೆ ಸಹಾಯಕರು | ಸಿಬ್ಬಂದಿ ಮತ್ತು ಲೆಕ್ಕಪತ್ರ ವಿಭಾಗದ ಎಲ್ಲಾ ಕೆಲಸಗಳನ್ನು ನಿರ್ವಹಿಸುವದು. |
| ದ್ವಿತಿಯ ದರ್ಜೆ ಸಹಾಯಕರು | ತರಬೇತಿ ಮತ್ತು ಆಡಳಿತ ವಿಭಾಗದ ಎಲ್ಲಾ ಕೆಲಸಗಳನ್ನು ನಿರ್ವಹಿಸುವದು. |
| ಬೆರಳಚ್ಚುಗಾರರು | ಕಛೇರಿ ಕಾಗದ ಪತ್ರಗಳನ್ನು ಹಾಗೂ ತರಬೇತಿ ಟಿಪ್ಪಣಿಗಳನ್ನು ಬೆರಳಚ್ಚು ಮಾಡುವದು. ದಾಸ್ತಾನು ವಿಭಾಗದ ನಿರ್ವಹಣೆ, ಝೆರಾಕ್ಸ್, ಫ್ಯಾಕ್ಸ್ ಯಂತ್ರಗಳ ಮೇಲ್ವಿಚಾರಣೆ, ರವಾನೆ ಮತ್ತು ಆವುದು ವಹಿ ನಿರ್ವಹಿಸುವದು. |
| "ಡಿ" ದರ್ಜೆ ನೌಕರರು | ಕಾರ್ಯಾಲಯದ ಶುಚಿತ್ವ ಹಾಗೂ ಕಛೇರಿಯ ಸುಗಮ ಆಡಳಿತ ನಿರ್ವಹಣೆಗಾಗಿ ಪ್ರಾಚಾರ್ಯರಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ ಸಹಾಯ ಮಾಡುವದು. ಪೀಠೋಪಕರಣಗಳ ಜವಾಬ್ದಾರಿ, ಡೂಪ್ಲಿಕೇಟ್ ಯಂತ್ರ ನಿರ್ವಹಣೆ, ಖಜಾನೆ, ಬ್ಯಾಂಕ್ ಕೆಲಸ. |

iii. ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು, ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು.

ಸಂಸ್ಥೆಯಲ್ಲಿ ಸರ್ಕಾರಿ ನೌಕರರಿಗೆ ತರಬೇತಿ ನೀಡಲಾಗುತ್ತಿದ್ದು ನಿರ್ಣಯ ತೆಗೆದುಕೊಳ್ಳುವ ಸಂದರ್ಭ ವಿರಳ. ಆದಾಗ್ಯೂ ಯಾವುದೇ ಪತ್ರ ವ್ಯವಹಾರವು ಸ್ವೀಕೃತಿಯ ರಿಜಿಸ್ಟರ್ ಮೂಲಕ ಕಛೇರಿಯ ವಿಷಯ ನಿರ್ವಾಹಕರಿಗೆ ತಲುಪಿದ ಮೇಲೆ ವಿಷಯ ನಿರ್ವಾಹಕರು ಅವಶ್ಯವಿದ್ದಲ್ಲಿ ಹೊಸ ಕಡತ ತೆರೆದು ಅಥವಾ ಇರುವ ಕಡತದಲ್ಲಿಯೇ ಸುಸಂಗತ ಸಕಲ ಪರಿಸ್ಥಿತಿಗಳೊಂದಿಗೆ ಪ್ರಸ್ತಾವನೆಯನ್ನು ಪ್ರಾಚಾರ್ಯರಿಗೆ ಮಂಡಿಸಲಾಗುತ್ತದೆ. ಪ್ರಾಚಾರ್ಯರು ತಮಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಪ್ರಸ್ತಾವನೆ ಬಗ್ಗೆ ಕೈಗೊಳ್ಳಬೇಕಾದ ಅನುಕ್ರಮದ ಕುರಿತು ನಿರ್ಣಯಿಸುವದು, ಅಥವಾ ಅಗತ್ಯವಿದ್ದಲ್ಲಿ ಆದೇಶಕ್ಕಾಗಿ ಕಡತವನ್ನು ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರುರವರಿಗೆ ಮಂಡಿಸಲಾಗುವುದು. ಹಾಗೂ ಅವರ ನಿರ್ದೇಶನದಂತೆ ಕ್ರಮ ಕೈಗೊಳ್ಳಲಾಗುವದು.

IV. ಕರ್ತವ್ಯ ನಿರ್ವಹಣೆಯಲ್ಲಿ ಅಳವಡಿಸಿಕೊಂಡಿರುವ ಸೂತ್ರಗಳು/ ವಿಧಿ ವಿಧಾನಗಳು

| | |
|---|---|
| ಪ್ರಾಚಾರ್ಯರು | ಸರ್ಕಾರದಿಂದ ಪ್ರದತ್ತವಾದ ಅಧಿಕಾರದಂತೆ ಹಾಗೂ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯಂತೆ ಕರ್ತವ್ಯಗಳನ್ನು ಆದ್ಯತೆ ಮೇರೆಗೆ ನಿರ್ವಹಿಸುವದು. |
| ಉಪ ಪ್ರಾಚಾರ್ಯರು | ವಹಿಸಿದ ಕರ್ತವ್ಯಗಳನ್ನು ಆದ್ಯತೆ ಮೇರೆಗೆ ನಿರ್ವಹಿಸುವದು. |
| ಬೋಧಕರು | ವಹಿಸಿದ ಕರ್ತವ್ಯಗಳನ್ನು ಆದ್ಯತೆ ಮೇರೆಗೆ ನಿರ್ವಹಿಸುವದು. |
| ಪ್ರಥಮ ದರ್ಜೆ ಸಹಾಯಕರು | ಕಡತ/ ಸ್ವೀಕೃತಿಗಳನ್ನು ಮಂಡಿಸಲು 5 ದಿನಗಳವರೆಗೆ ಕಾಲಾವಕಾಶ (ಕೈಪಿಡಿಯಂತೆ) ಹಾಗೂ ವಹಿಸಿದ ಕರ್ತವ್ಯಗಳನ್ನು ಆಯಾ ದಿನವೇ ಅಥವಾ ಮರುದಿನದಂದು ನಿರ್ವಹಿಸುವದು. |
| ದ್ವಿತೀಯ ದರ್ಜೆ ಸಹಾಯಕರು | ಶಾಖೆಯಲ್ಲಿ ನಿರ್ವಹಿಸಬೇಕಾದ ಕೆಲಸಗಳನ್ನು ಆ ದಿನವೇ ಅಥವಾ ಮರುದಿನ ನಿರ್ವಹಿಸುವದು. |
| ಬೆರಳಚ್ಚುಗಾರರು | ಶಾಖೆಯಲ್ಲಿ ನಿರ್ವಹಿಸಬೇಕಾದ ಕೆಲಸಗಳನ್ನು ಆ ದಿನವೇ ಅಥವಾ ಮರುದಿನ ನಿರ್ವಹಿಸುವದು. |
| "ಡಿ" ದರ್ಜೆ ನೌಕರರು | ತಮಗೆ ವಹಿಸಲಾದ ಕರ್ತವ್ಯಗಳನ್ನು ತಕ್ಷಣ ನಿರ್ವಹಿಸುವದು. |

V. ಕಛೇರಿಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ಬಳಸುತ್ತಿರುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು.

1) ಕಛೇರಿ ಕಾರ್ಯವಿಧಾನ ಕೈಪಿಡಿ.
2) ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು–1957.
3) ಕರ್ನಾಟಕ ಆರ್ಥಿಕ ಸಂಹಿತೆ–1958.
4) ಕರ್ನಾಟಕ ಖಜಾನೆ ಸಂಹಿತೆ–1963.
5) ಸಾದಿಲ್ವಾರು ವೆಚ್ಚ ಕೈಪಿಡಿ–1958.
6) ಸೇವಾ ವಿಷಯಕ್ಕೆ ಸಂಬಂಧಿಸಿದ ನಿಯಮಗಳು
7) ಕರ್ನಾಟಕ ನಾಗರಿಕ ಸೇವಾ (ವಾರ್ಷಿಕ ಕಾರ್ಯನಿರ್ವಹಣಾ ವರದಿಗಳು) ನಿಯಮಗಳು–1994.
8) ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957.
9) ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು–1966.
10) ಮಾಹಿತಿ ಹಕ್ಕು ಅಧಿನಿಯಮ–2005.
11) ಸೇವಾ ವಿಷಯಕ್ಕೆ ಸಂಬಂಧಿಸಿದಂತೆ ಹೊರಡಿಸಿದ–ಸರ್ಕಾರಿ ಆದೇಶಗಳು, ಅಧಿಸೂಚನೆ, ಇತ್ಯಾದಿ.
12) ಟ್ರೇಜರಿ ಮ್ಯಾನ್ಯೂಯೆಲ್.
13) ಇತರೆ ಮಾಹಿತಿಗಳು ಹಾಗೂ ಇನ್ನಿತರ ಕೈಪಿಡಿಗಳು.

VI. ಸಂಸ್ಥೆಯು ಹೊಂದಿರುವ ಅಥವಾ ಸಂಸ್ಥೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ವಿವರಗಳು.

1) ಸೇವಾ ಪುಸ್ತಕಗಳು (ಗ್ರೂಪ್ ಸಿ ಹಾಗೂ ಡಿ ನೌಕರರಿಗೆ ಸಂಬಂಧಿಸಿದ್ದು)
2) ಸೇವಾ ವಿಷಯಗಳಿಗೆ ಸಂಬಂಧಿಸಿದಂತೆ ಹೊರಡಿಸಿದ ಸರ್ಕಾರಿ ಆದೇಶಗಳು, ಅಧಿಸೂಚನೆ ಇತ್ಯಾದಿ.
3) ಸಾಮಾನ್ಯ ಸ್ವೀಕೃತಿ ವಹಿ.
4) ರವಾನೆ ವಹಿ.
5) ಸ್ಟಾಂಪು ವಹಿ.
6) ನಗದು ಪುಸ್ತಕ.
7) ಹಾಜರಿ ಪುಸ್ತಕ.
8) ಖರ್ಚು ವೆಚ್ಚಗಳ ಪುಸ್ತಕ.
9) ಡಿ.ಸಿ. ಬಿಲ್ಲು ಪುಸ್ತಕ.
10) ನಗದೀಕರಣ ಪುಸ್ತಕ.
11) ಚೆಕ್ ಸ್ವೀಕೃತಿ ಪುಸ್ತಕ.
12) ವೇತನ ಪಾವತಿ ಪುಸ್ತಕ.
13) ಪೀಠೋಪಕರಣ ಮತ್ತು ಇತರೆ ಸಾಮಗ್ರಿಗಳ ವಹಿ.
14) ಕಛೇರಿ ಆದೇಶ ಪುಸ್ತಕ.
15) ಸಿಬ್ಬಂದಿಗಳ ರಜೆ ಲೆಕ್ಕಗಳು.
16) ಗ್ರಂಥಾಲಯ ವಹಿ.
17) ವೈಯಕ್ತಿಕ ವಹಿ.
18) ಶಿಕ್ಷಣಾರ್ಥಿಗಳ ನೋಂದಣಿ ವಹಿ.
19) ಶಿಕ್ಷಣಾರ್ಥಿಗಳ ಹಾಜರಾತಿ ವಹಿ.
20) ತರಬೇತಿ ಉಪನ್ಯಾಸಕರ ಡೈರಿ.

VII. ಕಾರ್ಯನೀತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು.

ಸಂಸ್ಥೆಯಲ್ಲಿ ಅಸ್ತಿತ್ವದಲ್ಲಿರುವ ನಿಯಮಗಳು ಮತ್ತು ನಿಬಂಧನೆಗಳನ್ವಯ ಸೇವಾ ವಿಷಯಗಳು, ಆರ್ಥಿಕ ವಿಷಯಗಳು ಹಾಗೂ ಅಭಿವೃದ್ಧಿ ವಿಷಯಗಳ ಕುರಿತು ಜಿಲ್ಲೆಯ ವಿವಿಧ ಇಲಾಖೆಗಳ ಗ್ರೂಪ್ ಸಿ ಮತ್ತು ಡಿ ದರ್ಜೆ ನೌಕರರಿಗೆ ತರಬೇತಿ ನೀಡುವ ಕೆಲಸ ನಿರ್ವಹಿಸುತ್ತಿರುವದರಿಂದ, ಜನಪ್ರತಿನಿಧಿಗಳೊಂದಿಗೆ ಸಮಾಲೋಚನೆ ಮಾಡುವ ಸಂದರ್ಭ ಬರುವದಿಲ್ಲ.

VIII. ಸಲಹೆಗಳನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು, ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳ ಪಟ್ಟಿ ಮತ್ತು ಇವುಗಳು ನಡೆಸುವ ಸಭೆಗಳು ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಯ ನಡುವಳಿಕೆಗಳು ಸಾರ್ವಜನಿಕರಿಗೆ ಲಭ್ಯವಿರುವದೇ

ಸಂಸ್ಥೆಗೆ ಅನ್ವಯಿಸುವದಿಲ್ಲ.

IX. ಕಛೇರಿಯ ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ.

ಪ್ರಾಚಾರ್ಯರು, ಕಛೇರಿಯ ಮುಖ್ಯಸ್ಥರಾಗಿದ್ದು, ಕಛೇರಿಯ ಮುಖ್ಯಸ್ಥರಿಗೆ ಸರ್ಕಾರ/ ಇಲಾಖೆ ನೀಡಿದ ಹಕ್ಕು ಬಾಧ್ಯತೆಗೆ ಅನುಗುಣವಾಗಿ ಕರ್ತವ್ಯ ನಿರ್ವಹಣೆ.

ಕಛೇರಿಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಹುದ್ದೆಯ ಸಂಖ್ಯೆ | ಕಾರ್ಯಕಾರಿ | ಖಾಲಿ |
|---|---|---|---|---|
| 1) | ಪ್ರಾಚಾರ್ಯರು | 01 | – | 01 |
| 2) | ಉಪ ಪ್ರಾಚಾರ್ಯರು ಶ್ರೀ ಪ್ರಮೋದ ಬಿ ಬುರ್ಲಿ ಹಾಗೂ ಪ್ರಭಾರ ಪ್ರಾಚಾರ್ಯರು | 01 | 01 | – |
| 3) | ಬೋಧಕರು<br>1) ಶ್ರೀ ಎಸ್.ಆರ್. ಮುತಾಲಿಕ<br>2) "ವ್ಹಿ.ಎಸ್. ದಂಡಿನ | 02 | 02 | – |
| 4) | ಪ್ರಥಮ ದರ್ಜೆ ಸಹಾಯಕರು ಹುದ್ದೆ ಶ್ರೀ ಎಂ.ಜಿ. ಜೋಶಿ | 01 | 01 | – |
| 5) | ದ್ವಿತೀಯ ದರ್ಜೆ ಸಹಾಯಕರು ಹುದ್ದೆ ಶ್ರೀ ಎಂ.ಎಸ್. ಪಾಟೀಲ | 01 | 01 | – |
| 6) | ಬೆರಳಚ್ಚುಗಾರರು ಶ್ರೀ ಎಸ್.ವೈ. ಮನಗೂಳಿ ಒಂದು ಹುದ್ದೆ ಖಾಲಿ | 02 | 01 | 01 |
| 7) | ಗ್ರೂಫ್ "ಡಿ" ನೌಕರರು<br>1) ಶ್ರೀ ಡಿ.ಜಿ. ಸೂರ್ಯವಂಶಿ<br>2) "ಎಸ್.ಜಿ. ಮಸಳಿ<br>3) "ಎಚ್.ಆಯ್. ನಂದ್ಯಾಳ | 03 | 03 | – |

X. ಕಛೇರಿಯ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ | ಒಟ್ಟು ಸಂಬಳ (ರೂ.) |
|---|---|---|
| 1) | ಪ್ರಾಚಾರ್ಯರು | – |
| 2) | ಶ್ರೀ ಪ್ರಮೋದ ಬಿ ಬುರ್ಲಿ, ಉಪ ಪ್ರಾಚಾರ್ಯರು | 20,548–00 |
| 3) | "ಎಸ್.ಆರ್. ಮುತಾಲಿಕ, ಬೋಧಕರು–1 | 17,497–00 |
| 4) | "ವ್ಹಿ.ಎಸ್. ದಂಡಿನ, ಬೋಧಕರು–2 | 17,441–00 |
| 5) | "ಎಂ.ಜಿ. ಜೋಶಿ, ಪ್ರ.ದ.ಸ. | 15,455–00 |
| 6) | "ಎಂ.ಎಸ್. ಪಾಟೀಲ, ದ್ವಿದಸ. | 7,966–00 |
| 7) | "ಎಸ್.ವೈ. ಮನಗೂಳಿ, ಬೆರಳಚ್ಚುಗಾರರು | 7,600–00 |
| 8) | "ಡಿ.ಜಿ. ಸೂರ್ಯವಂಶಿ, ಡಿ ದರ್ಜೆ ನೌಕರ | 6,348–00 |
| 9) | "ಎಸ್.ಜಿ. ಮಸಳಿ ಡಿ ದರ್ಜೆ ನೌಕರ | 9,218–00 |
| 10) | "ಎಚ್.ಆಯ್, ನಂದ್ಯಾಳ ಡಿ ದರ್ಜೆ ನೌಕರ | 8,607–00 |

XI ಯೋಜನೆಗಳ ವಿವರಗಳು, ವಾಸ್ತವಿಕ ವೆಚ್ಚಗಳು ಮತ್ತು ಬಟವಾಡೆ ಮಾಡಿದ ವರದಿಗಳನ್ನೊಳಗೊಂಡಂತೆ ಪ್ರತಿ ಏಜೆನ್ಸಿಗೂ ಹಂಚಿಕೆ ಮಾಡಿದ ಆಯವ್ಯಯ.

ಸಂಸ್ಥೆಯಲ್ಲಿ ಯಾವದೇ ಯೋಜನಾ ಕಾರ್ಯಕ್ರಮಗಳನ್ನು ರೂಪಿಸಿರುವುದಿಲ್ಲವಾದ್ದರಿಂದ ಆಯವ್ಯಯ ಹಂಚಿಕೆ ಮಾಡಿರುವುದಿಲ್ಲ.

XII. ಕಛೇರಿಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಹಾಗೂ ಫಲಾನುಭವಿಗಳ ವಿವರಗಳು.

ಸಂಸ್ಥೆಯಲ್ಲಿ ಯಾವದೇ ಸಹಾಯಧನ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿರುವದಿಲ್ಲ.

XIII. ರಿಯಾಯಿತಿಗಳು, ಅಪ್ಪಣೆ ಪತ್ರಗಳು ಅಥವಾ ಅಧಿಕಾರ ಪತ್ರ ಮಂಜೂರಾತಿಗಳನ್ನು ಪಡೆದವರ ವಿವರಗಳು.

ಸಂಸ್ಥೆಯಲ್ಲಿ ಯಾವದೇ ರಿಯಾಯಿತಿ, ಅಪ್ಪಣೆ ಪತ್ರ ಅಥವಾ ಅಧಿಕಾರ ಪತ್ರವನ್ನು ಮಂಜೂರು ಮಾಡಿರುವದಿಲ್ಲ.

XIV. ವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ, ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳ ವಿವರಗಳು.

–ಇಲ್ಲ–.

XV. ಗ್ರಂಥಾಲಯವನ್ನು ಸಾರ್ವಜನಿಕರ ಬಳಕೆಗೆ ನಿರ್ವಹಿಸಿದ್ದಲ್ಲಿ ಗ್ರಂಥಾಲಯವು ಅಥವಾ ವಾಚನಾಲಯವು ಕಾರ್ಯ ನಿರ್ವಹಿಸುವ ಸಮಯ ಹಾಗೂ ಸಾರ್ವಜನಿಕರಿಗೆ ಮಾಹಿತಿಯನ್ನು ಪಡೆಯಲು ಇರುವ ಅನುಕೂಲತೆಗಳ ವಿವರ.

ಸಾರ್ವಜನಿಕರ ಬಳಕೆಗೆ ಗ್ರಂಥಾಲಯ ಲಭ್ಯವಿರುವುದಿಲ್ಲ. ಸಾರ್ವಜನಿಕರು ಕಛೇರಿ ವೇಳೆಯಲ್ಲಿ ಕಛೇರಿಯಲ್ಲಿರುವ ಲಭ್ಯವಿರುವ ಮಾಹಿತಿಯನ್ನು ಪಡೆಯಲು ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ ಇವರಿಗೆ ಅರ್ಜಿ ನೀಡುವದು ಅಥವಾ ಸಂಪರ್ಕಿಸುವದು. ಕಛೇರಿ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ: 08352– 270004.

XVI. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಹುದ್ದೆ ಹಾಗೂ ಇತರೆ ವಿವರಗಳು

| ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು ಮತ್ತು ಪದನಾಮ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು ಮತ್ತು ಪದನಾಮ | ದೂರವಾಣಿ ಸಂಖ್ಯೆ |
|---|---|---|
| ಶ್ರೀ ಪ್ರಮೋದ ಬಿ ಬುರ್ಲಿ ಪ್ರಭಾರ ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ. | ಶ್ರೀ ಎಸ್.ಆರ್. ಮುತಾಲಿಕ ಬೋಧಕರು, ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ. | ಕಛೇರಿ–270004. |

XVII. ಇಂತಹ ಇನ್ನಿತರ ಯಾವದೇ ನಿಗದಿಪಡಿಸಿದ ಮಾಹಿತಿ.

– ಇಲ್ಲ–

ಪಿ.ಆರ್.1210 ಪ್ರಾಚಾರ್ಯರು, ಜಿಲ್ಲಾ ತರಬೇತಿ ಸಂಸ್ಥೆ, ವಿಜಾಪೂರ.

**ಜಿಲ್ಲಾಧಿಕಾರಿಗಳು ಹಾಗೂ ಶಿಸ್ತು ಪ್ರಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ–ಇವರ ಕಛೇರಿ ನಡವಳಿಗಳು**

**ವಿಷಯ:** ಶ್ರೀ ಮಹಮದ್ ಗ್ರೂಪ್ ಡಿ ನೌಕರರು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಬಗ್ಗೆ ಶಿಸ್ತು ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:**1) ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ–ಇವರ ಕಛೇರಿ ಮೆಮೋ ಸಂ:ಇಸಿಎ/ ಎಂಡಿವೈ/ ಇಎಸ್‌ಟಿ/ 52/ 2006–07, ದಿನಾಂಕ:12.01.2007.

2) ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ–ಇವರ ಪತ್ರಸಂಖ್ಯೆ: ಇಸಿಇ/ ಎಂಡಿವೈ/ ಜಿಎಲ್/615/ 2006–07, ದಿನಾಂಕ:16.04.2007.

3) ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ–ಇವರ ಅಬಕಾರಿ ಆಯುಕ್ತರು, ಬೆಂಗಳೂರು ಇವರಿಗೆ ಬರೆದ ಪತ್ರ ಸಂಖ್ಯೆ: ಇಸಿಎ/ ಎಂಡಿವೈ/ ಇಎಸ್‌ಟಿ/ 52/2006–07, ದಿನಾಂಕ:16.04.2007.

4) ಖಜಾಬಿ ಕೋಂ ಮಹಮದ್ ವಾಸ ಮನೆ ನಂ.3962, 2ನೇ ಕ್ರಾಸ್, ಶಂಕರನಗರ, ಅಂಬುಜಮ್ಮ ಮನೆ ಎದುರು, ಮಂಡ್ಯ ಸಿಟಿ–ಇವರ ಅರ್ಜಿ ದಿನಾಂಕ:21.06.2007.

5) ಅಬಕಾರಿ ಆಯುಕ್ತರು, ಬೆಂಗಳೂರು–ಇವರ ಪತ್ರ ಸಂಖ್ಯೆ: ಇಸಿಇ/35/ ಗ್ರೂಪ್ ಡಿ/ ಗೈಹಾ/2007, ದಿನಾಂಕ:22.06.2007.

6) ಮಹಮದ್ ಗ್ರೂಪ್ ಡಿ ನೌಕರ ಇವರ ಮನವಿ ದಿನಾಂಕ:02.07.2007.

7) ಅಬಕಾರಿ ಅಧೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲ್ಲೆ, ಇವರ ಹಾಜರಾತಿ ವರದಿ ದಿನಾಂಕ:16.10.2007 ಹಾಗೂ ಪತ್ರ ಸಂಖ್ಯೆ: ಇಎಕ್ಸ್‌ಇ/ ಎಂಡಿವೈ/ ಇಐಬಿ/ ಹಾಜರಾತಿ/ 42/ 2007–08, ದಿನಾಂಕ:20.12.2007.

8) ವಾರ್ತಾ ಮತ್ತು ಪ್ರಚಾರ ಅಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ–ಇವರಿಗೆ ಬರೆದ ಪತ್ರ ಸಂಖ್ಯೆ: ಎಕ್ಸ್‌ಇ/ ಎಂಡಿವೈ/ಇಎಸ್‌ಟಿ/ 52/2006–07, ದಿನಾಂಕ:02.02.2008, 28.03.2008, 25.04.2008 ಮತ್ತು 08.07.2008.

9) ಅಬಕಾರಿ ಆಯುಕ್ತರು, ಬೆಂಗಳೂರು–ಇವರ ಸುತ್ತೋಲೆ ಸಂಖ್ಯೆ: ಇಸಿಇ/ ಬಿಎನ್‌ಜಿ/02 ಡಿಎಸ್‌ಸಿ(1)/2008, ದಿನಾಂಕ:15.04.2008.

10) ಶ್ರೀ ಮಹಮದ್ ಗ್ರೂಪ್ ಡಿ ನೌಕರ ಇವರಿಗೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿಯಿಂದ ನೀಡಲಾದ ನೋಟೀಸ್ ಸಂಖ್ಯೆ: ಇಎಕ್ಸ್‌ಇ/ ಎಂಡಿವೈ/ ಇಎಸ್‌ಟಿ/52/2006–07, ದಿನಾಂಕ:29.06.2007, 30.07.2007, 20.12.2007, 25.04.2008, 08.07.2008 ಮತ್ತು 14.08.2008.

11) ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ–ಇವರ ಪತ್ರ ಸಂಖ್ಯೆ: ಇಎಕ್ಸ್‌ಇ/ ಎಂಡಿವೈ/ ಇಎಸ್‌ಟಿ/01/2008–09, ದಿನಾಂಕ:19.09.2008.

**ಪ್ರಸ್ತಾವನೆ:**

ಶ್ರೀ ಮಹಮದ್–ಇವರು ದಿನಾಂಕ:29.08.1991 ರಂದು ಅಬಕಾರಿ ಇಲಾಖೆಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ಹೊಂದಿ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ–ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ ಅಲ್ಲಿಂದ ದಿನಾಂಕ:29.12.2006 ರವರೆವಿಗೂ ಮೇಲ್ಕಂಡ ಕಛೇರಿಯಲ್ಲಿಯೇ ಗ್ರೂಪ್ ಡಿ ನೌಕರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಸದರಿ ನೌಕರರು ಮೇಲಾಧಿಕಾರಿಗಳ ಅನುಮತಿ ಪಡೆಯದೇ ದಿನಾಂಕ:30.12.2006 ರಿಂದ ಕರ್ತವ್ಯಕ್ಕೆ ಗೈರು ಹಾಜರಾದ ನಿಮಿತ್ತ ಉಲ್ಲೇಖ 1 ರ ಮೆಮೋದ ಮೂಲಕ ಕರ್ತವ್ಯಕ್ಕೆ ಹಾಜರಾಗುವಂತೆ ತಪ್ಪಿದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲು ಕ್ರಮಕೈಗೊಳ್ಳಲಾಗುವುದೆಂದು ತಿಳಿಯಪಡಿಸಲಾಗಿತ್ತು. ಸದರಿ ಮೆಮೋವನ್ನು ಅಬಕಾರಿ ನಿರೀಕ್ಷಕರು ಮಂಡ್ಯ ವಲಯ ಇವರ ಮೂಲಕ ಜಾರಿ ಮಾಡುವಂತೆ ಕಳುಹಿಸಿಕೊಟ್ಟಿದ್ದು. ಸದರಿ ಅಬಕಾರಿ ನಿರೀಕ್ಷಕರು, ಸ್ಥಳೀಯ ವಿಳಾಸದಲ್ಲಿ ಅವರ ಪತ್ನಿಯನ್ನು ವಿಚಾರಿಸಲಾಗಿ ಅವರು ಮನೆಯಲ್ಲಿ ಇರುವುದಿಲ್ಲವೆಂದು ತಿಳಿಸಿರುವುದಾಗಿ ಉಲ್ಲೇಖ 2ರ ಮೂಲಕ ವರದಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಅಬಕಾರಿ ಉಪ ಆಯುಕ್ತರು, ಮಂಡ್ಯ ಜಿಲ್ಲೆ, ಮಂಡ್ಯ–ಇವರು ಸಹ ಉಲ್ಲೇಖ 3ರ ಪತ್ರ ಮೂಲಕ ಅಬಕಾರಿ ಆಯುಕ್ತರು, ಬೆಂಗಳೂರು–ಇವರಿಗೆ ವರದಿ ಸಲ್ಲಿಸಿ, ಸದರಿ ನೌಕರರ ವಿರುದ್ಧ ಮುಂದಿನ ಸೂಕ್ತ ಕ್ರಮ ಜರುಗಿಸಲು ನಿರ್ದೇಶನ ನೀಡಬೇಕಾಗಿ ಕೋರಿರುತ್ತಾರೆ. ಈ ಮಧ್ಯೆ ಮೇಲ್ಕಂಡ ನೌಕರರ ಪತ್ನಿಯಾದ ಖಜಾಬಿ ಎನ್ನುವವರು ಉಲ್ಲೇಖ 4ರ ಮೂಲಕ ಅರ್ಜಿಯನ್ನು ಸಲ್ಲಿಸಿ, ತನ್ನ ಗಂಡ ಕೆಲಸಕ್ಕೆ ಹೋಗಿಬರುವುದಾಗಿ ಹೇಳಿ, ಇಲ್ಲಿಯವರೆಗೂ ಬಂದಿರುವುದಿಲ್ಲವೆಂತಲೂ ಎಲ್ಲಿದ್ದಾರೆ ಎಂದು ಗೊತ್ತಿರುವುದಿಲ್ಲವೆಂತಲೂ ತಿಳಿಸಿ, ತನ್ನ ಗಂಡ ಮಹಮದ್‌ನನ್ನು ಪತ್ತೆ ಮಾಡಿಕೊಡಬೇಕೆಂದು ವಿನಂತಿಸಿರುತ್ತಾರೆ. ಸದರಿ ಅರ್ಜಿಯನ್ನು ಪರಿಶೀಲಿಸಿ, ಅಬಕಾರಿ ಉಪ ಆಯುಕ್ತರು, ಮಂಡ್ಯ ಜಿಲ್ಲೆ, ಮಂಡ್ಯ–ಇವರು ಅಬಕಾರಿ ಉಪ ಆಯುಕ್ತರು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರಿಗೆ ದಿನಾಂಕ:22.06.2007ರ ಮೂಲಕ ಸದರಿ ನೌಕರರ ಸೇವಾ ಪುಸ್ತಕದಲ್ಲಿ ನಮೂದಾಗಿರುವ ತಾವರೆಗೆರೆ ಗ್ರಾಮ, ತಾವರೆಗೆರೆ ಪೋಸ್ಟ್ ಕುಷ್ಟಗಿ ತಾಲ್ಲೂಕು ರಾಯಚೂರು ಜಿಲ್ಲೆ (ಹಾಲಿ ಕೊಪ್ಪಳ ಜಿಲ್ಲೆ) ಎಂದಿದ್ದು, ಈ ವಿಳಾಸದಲ್ಲಿ ನೌಕರರಾಗಲೀ ಅಥವಾ ಸಂಬಂಧಿಕರಾಗಲೀ ಇದ್ದಲ್ಲಿ ಈ ಬಗ್ಗೆ ಲಿಖಿತ ಹೇಳಿಕೆಯನ್ನು ದಾಖಲಿಸಿ ತಿಳಿಸುವಂತೆ ಕೋರಲಾಗಿದ್ದು, ಅವರಿಂದ ವರದಿ ಬಂದಿರುವುದಿಲ್ಲ. ನಂತರ ಉಲ್ಲೇಖ 5ರ ದಿನಾಂಕ:22.06.2007ರ ಪತ್ರದ ಮೂಲಕ ಅಬಕಾರಿ ಆಯುಕ್ತರು, ಬೆಂಗಳೂರು ಇವರು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 28ರ ಉದ್ಧೃತ ಭಾಗವನ್ನು ಲಗತ್ತಿಸಿ ಕಳುಹಿಸುತ್ತಾ, ಅನಧಿಕೃತ ಗೈರು ಹಾಜರಾದ ನೌಕರರ ವಿರುದ್ಧ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಸೂಚಿಸಿರುತ್ತಾರೆ. ಅಬಕಾರಿ ಆಯುಕ್ತರ ನಿರ್ದೇಶನದಂತೆ ಮೇಲ್ಕಂಡ ಗೈರು ಹಾಜರಾದ ನೌಕರರಿಗೆ ದಿನಾಂಕ:29.06.2007ರ ನೋಟೀಸ್ ಮೂಲಕ ಕರ್ತವ್ಯಕ್ಕೆ ಹಾಜರಾಗುವಂತೆ ತಿಳಿಯಪಡಿಸಲಾಗಿತ್ತು. ಅದರಂತೆ ನೌಕರರು ದಿನಾಂಕ:02.07.2007 ರಂದು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಮಂಡ್ಯ ಜಿಲ್ಲೆ ಮಂಡ್ಯ– ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ ಕೌಟುಂಬಿಕ ಕಲಹದಿಂದ ಯಾವುದೇ ಅನುಮತಿಯನ್ನು ಪಡೆಯದೇ ದಿನಾಂಕ:01.01.2007 ರಿಂದ ಕರ್ತವ್ಯಕ್ಕೆ ಗೈರು ಹಾಜರಾಗುತ್ತೇನೆಂತಲೂ ಇತ್ತೀಚೆಗೆ ನನ್ನ ಸಮಸ್ಯೆ ಬಗೆಹರಿದಿರುವುದರಿಂದ ದಿನಾಂಕ:02.07.2007 ರಂದು ಪೂರ್ವಾಹ್ನ ಕಛೇರಿ ಕರ್ತವ್ಯಕ್ಕೆ ಹಾಜರಾಗುತ್ತಿರುವುದಾಗಿ ವರದಿ ಮಾಡಿಕೊಂಡಿರುತ್ತಾರೆ. ಸದರಿ ನೌಕರರು ದಿನಾಂಕ:01.01.2007 ರಿಂದ 01.07.2007 ರವರೆಗೆ ಕರ್ತವ್ಯಕ್ಕೆ ಗೈರುಹಾಜರಾಗಿರುವ ನಿಮಿತ್ತ ಗೈರುಹಾಜರಾತಿಯ ಬಗ್ಗೆ ಕಾರಣಗಳೇನಾದರೂ ಇದ್ದಲ್ಲಿ ಲಿಖಿತ ರೂಪದಲ್ಲಿ ಸಮಜಾಯಿಷಿಯನ್ನು ನೀಡುವಂತೆ ಆದೇಶಿಸಲಾಗಿತ್ತು. ಅಲ್ಲದೇ ಸದರಿ ನೌಕರರನ್ನು ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಇಎಕ್ಸ್‌ಇ/ ಎಂಡಿವೈ/ ಇಎಸ್‌ಟಿ/ 52/2007–08, ದಿನಾಂಕ:03.07.2007ರ ಪ್ರಕಾರ ಅಬಕಾರಿ ಅಧೀಕ್ಷಕರ ಕಛೇರಿ, ವಿಚಕ್ಷಣದಳ, ಮಂಡ್ಯ ಜಿಲ್ಲೆ ಹಾಗೂ ಅಬಕಾರಿ ಉಪ ಅಧೀಕ್ಷಕರ ಕಛೇರಿ, ಉಪ ವಿಭಾಗ, ಮಂಡ್ಯ ಈ ಕಛೇರಿಗಳಲ್ಲಿ ಕೆಲಸದ ಒತ್ತಡವಿರುವುದರಿಂದ ಆಡಳಿತಾತ್ಮಕ ಹಿತದೃಷ್ಟಿಯಿಂದ ಕರ್ತವ್ಯ ನಿರ್ವಹಿಸುವಂತೆ ನಿಯೋಜಿಸಿ, ದಿನಾಂಕ:03.07.2007ರ ಅಪರಾಹ್ನ ಕರ್ತವ್ಯದಿಂದ ಬಿಡುಗಡೆಗೊಳಿಸಿ, ನಿಯೋಜಿಸಿದ ಸ್ಥಳದಲ್ಲಿ ಕರ್ತವ್ಯದ ಮೇಲೆ ಹಾಜರಾಗುವಂತೆ ಆದೇಶಿಸಲಾಗಿರುತ್ತದೆ. ಈ ಬಗ್ಗೆ ಉಲ್ಲೇಖ 7ರ ಪ್ರಕಾರ ಅಬಕಾರಿ ಅಧೀಕ್ಷಕರು, ವಿಚಕ್ಷಣದಳ, ಮಂಡ್ಯ ಜಿಲೆ, ಮಂಡ್ಯ–ಇವರು ವರದಿಯನ್ನು ಸಲ್ಲಿಸಿ, ಸದರಿ ನೌಕರರು ದಿನಾಂಕ:03.07.2007ರ ಅಪರಾಹ್ನ ಕಛೇರಿ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ಈ ನೌಕರರು ದಿನಾಂಕ:03.07.2007 ರಿಂದ 06.11.2007ರವರೆಗೆ ಕಛೇರಿ ಕರ್ತವ್ಯ ನಿರ್ವಹಿಸಿದ್ದು, ದಿನಾಂಕ:07.11.2007 ರಿಂದ ಯಾವುದೇ ಅನುಮತಿಯನ್ನು ಪಡೆಯದೇ ಕಛೇರಿ ಕರ್ತವ್ಯಕ್ಕೆ ಗೈರುಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ಸದರಿಯವರ ವರದಿಯನ್ನು ಆಧಾರಿಸಿ, ಮೇಲ್ಕಂಡ ನೌಕರರಿಗೆ ದಿನಾಂಕ:20.12.2007ರ ನೋಟೀಸ್‌ನ್ನು ಸ್ಥಳೀಯ ವಿಳಾಸಕ್ಕೆ ನೀಡಿ, ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖಾ ಕಛೇರಿ, ಮಂಡ್ಯ ತಾಲ್ಲೂಕು ಇವರಿಗೆ ದ್ವಿಪ್ರತಿಯಲ್ಲಿ ನೀಡಿ ಮೇಲ್ಕಂಡ ನೌಕರರಿಗೆ ಜಾರಿ ಮಾಡಿ, ಸ್ವೀಕೃತಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಅದರಂತೆ ಸದರಿ ಅಬಕಾರಿ ಉಪ ನಿರೀಕ್ಷಕರು ಪತ್ರ ಸಂಖ್ಯೆ: ಜಾತ/ ಜಿಎಲ್/48/07–08, ದಿನಾಂಕ:28.12.2007ರ ಪತ್ರದ ಮೂಲಕ ಸದರಿ ನೌಕರರು ತಮ್ಮ ತಾಯಿಯವರಿಗೆ ಹುಷಾರಿಲ್ಲವೆಂದು ಅವರ ಸ್ವಂತ ಊರಾದ ರಾಯಚೂರು ಜಿಲ್ಲೆಗೆ ಹೋಗಿರುವುದಾಗಿ ತಿಳಿದು ಬಂದಿದ್ದು, ನೋಟೀಸ್ ಜಾರಿ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ವರದಿ ಸಲ್ಲಿಸಿರುತ್ತಾರೆ. ಇವರ ವರದಿಯನ್ನು ಆಧಾರಿಸಿ, ಉಲ್ಲೇಖ 8ರ ಪ್ರಕಾರ ಜಿಲ್ಲಾ ವಾರ್ತಾ ಮತ್ತು ಪ್ರಚಾರ ಅಧಿಕಾರಿಗಳು,

ಮಂಡ್ಯ ಜಿಲ್ಲೆ, ಮಂಡ್ಯ ಇವರಿಗೆ ಮೇಲ್ಕಂಡ ನೌಕರರ ಗೈರು ಹಾಜರಾತಿ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟಪಡಿಸುವಂತೆ ಕೋರಲಾಗಿತ್ತು. ಸ್ಥಳೀಯ ಕನ್ನಡ ದಿನಪತ್ರಿಕೆ ಸುದ್ದಿ ಸಂಘರ್ಷದಲ್ಲಿ ದಿನಾಂಕ:06.04.2008 ರಂದು ಸದರಿ ನೌಕರರ ಗೈರು ಹಾಜರಾತಿ ಬಗ್ಗೆ ಪ್ರಕಟಗೊಂಡಿರುತ್ತದೆ. ಆದಾಗ್ಯೂ ಸದರಿ ನೌಕರರು ಕಛೇರಿ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಅಬಕಾರಿ ಆಯುಕ್ತರು, ಬೆಂಗಳೂರು-ಇವರು ಉಲ್ಲೇಖ 9 ರ ಸುತ್ತೋಲೆಯಲ್ಲಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವ ನೌಕರರ ವಿರುದ್ಧ ಸಕಾಲದಲ್ಲಿ ನಿಯಮದನ್ವಯ ಕ್ರಮ ಜರುಗಿಸುವ ಕುರಿತು, ಸ್ಪಷ್ಟ ನಿರ್ದೇಶನ ನೀಡಿರುವ ಮೇರೆಗೆ ಸದರಿ ನೌಕರರಿಗೆ ಉಲ್ಲೇಖ 10 ರಲ್ಲಿ ನಮೂದಿಸಿರುವಂತೆ ಹಲವಾರು ಬಾರಿ ಕಾರಣ ಕೇಳುವ ನೋಟೀಸ್‌ಗಳನ್ನು ನೀಡಲಾಗಿರುತ್ತದೆ. ಈ ಎಲ್ಲಾ ನೋಟೀಸ್‌ಗಳು ಸಹ ಮಂಡ್ಯದ ಸ್ಥಳೀಯ ವಿಳಾಸ ಹಾಗೂ ನೌಕರರ ಸೇವಾ ಪುಸ್ತಕದಲ್ಲಿ ನಮೂದಾಗಿರುವ ಮೂಲ ವಿಳಾಸದಲ್ಲಿ ನೌಕರರಿಗೆ ಜಾರಿಯಾಗದೇ ಮರಳಿ ಬಂದಿರುತ್ತವೆ. ದಿನಾಂಕ:14.08.2008ರ ನೋಟೀಸ್ ಸದರಿ ನೌಕರರಿಗೆ ಜಾರಿಮಾಡಲು ಮೂಲ ವಿಳಾಸಕ್ಕೆ ಕಳುಹಿಸಿದ್ದಾಗ್ಯೂ ಸದರಿ ನೋಟೀಸ್ ಜಾರಿಯಾಗದೇ ಇರುವ ಬಗ್ಗೆ ಉಲ್ಲೇಖ 11ರ ಪತ್ರದ ಮೂಲಕ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ-ಇವರು ವರದಿ ಸಲ್ಲಿಸಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಸದರಿ ನೌಕರರು ಕರ್ತವ್ಯದಲ್ಲಿ ನಿರ್ಲಕ್ಷತನ ತೋರಿ, ಉದ್ದೇಶ ಪೂರ್ವಕವಾಗಿ ಗೈರು ಹಾಜರಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಸದರಿ ನೌಕರರ ವಿರುದ್ಧ ಶಿಸ್ತು ಕ್ರಮಕ್ಕೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ-ಇವರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ನೌಕರರು ನಿಯಮಗಳನ್ನು ಉಲ್ಲಂಘಿಸಿ ಈವರೆವಿಗೂ ಸುಮಾರು 19 ತಿಂಗಳಿಗೂ ಮೀರಿ, ಕರ್ತವ್ಯಕ್ಕೆ ಗೈರು ಹಾಜರಾಗಿ ಕೆ.ಸಿ.ಎಸ್.ಆರ್. ನಿಯಮ 106ಎ, 107 ಮತ್ತು 108 ಹಾಗೂ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುವುದರಿಂದ ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1) (ಎ) ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ ಸದರಿ ನೌಕರರ ನಿಯಂತ್ರಣಾಧಿಕಾರಿಗಳ ಶಿಫಾರಸ್ಸಿನನ್ವಯ ಸದರಿ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಉದ್ದೇಶದಿಂದ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸುವುದು ಸೂಕ್ತವೆಂದು ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ/ ಎಂಡಿವೈ/ ಇಎಸ್‌ಟಿ/ 52/ 2006-07, ದಿನಾಂಕ:3ನೇ ಅಕ್ಟೋಬರ್, 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪುಟ್ಟಮಾದಯ್ಯ, ಕೆ.ಎ.ಎಸ್., ಜಿಲ್ಲಾಧಿಕಾರಿ (ಪ್ರಭಾರ) ಹಾಗೂ ಶಿಸ್ತು ಪ್ರಾಧಿಕಾರಿ, ಮಂಡ್ಯ ಜಿಲ್ಲೆ-ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1)(ಎ) ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹಮದ್ ಗ್ರೂಪ್ ಡಿ ನೌಕರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರನ್ನು ಇಲಾಖಾ ವಿಚಾರಣೆ ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿದ್ದೇನೆ.

ಪಿ.ಆರ್.1135 ಜಿಲ್ಲಾಧಿಕಾರಿಗಳು ಹಾಗೂ ಶಿಸ್ತು ಪ್ರಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ.

**ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು,**

**ಅಧಿಸೂಚನೆ ನಂ.1/2008 ದಿನಾಂಕ:18ನೇ ನವೆಂಬರ್, 2008**

ಮಾಹಿತಿ ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ ಕಾಯ್ದೆ ನಂ. 22/05) ಅಡಿಯಲ್ಲಿಯ ಕಾಲಂ 4 (1)(ಎ) ಮತ್ತು 4(1)(ಬಿ) ಅಡಿಯಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು ಬಗೆಗೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗಿನಂತೆ ಸಾರ್ವಜನಿಕವಾಗಿ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| | |
|---|---|
| ಕೈಪಿಡಿ-1 ಇಲಾಖೆಯ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು | ಇಲಾಖೆ-ರಾಯಚೂರು, ಕಾರ್ಯ ಮತ್ತು ಕರ್ತವ್ಯ-ಕೈಗಾರಿಕಾಭಿವೃದ್ಧಿ, ಸೌಲತ್ತುಗಳು ಮತ್ತು ಕೈಗಾರಿಕಾಭಿವೃದ್ಧಿಗೆ ಸಂಬಂಧಿಸಿದ ಕೆಲಸ ಕಾರ್ಯಗಳು. |
| ಕೈಪಿಡಿ-2 ಇಲಾಖೆಯ ಅಧಿಕಾರಿಗಳ ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು | ವಿವರಗಳು ಅನುಬಂಧ-1ರಲ್ಲಿ ಇವೆ. |
| ಕೈಪಿಡಿ-3 ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯನ್ನೊಳಗೊಂಡು, ತೀರ್ಮಾನ ಕೈಗೊಳ್ಳುವಾಗ ಅನುಸರಿಸಬೇಕಾದ ಕಾರ್ಯವಿಧಾನಗಳು | ವಿವಿಧ ವಿಭಾಗಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ವಿಷಯ ನಿರ್ವಾಹಕರು ಪ್ರಸ್ತಾವನೆಗಳನ್ನು ಸ್ವೀಕರಿಸಿ ಕಾರ್ಯಗತಗೊಳಿಸುವ ಬಗ್ಗೆ ಕಡತವನ್ನು ತೆರೆದು ಪ್ರಸ್ತಾವನೆಯನ್ನು ಸಂಬಂಧಪಟ್ಟ ಕಡತದಲ್ಲಿ ನಿವೇದನೆಯನ್ನು ಸಲ್ಲಿಸುವದು. ನಂತರ ಸಂಬಂಧಪಟ್ಟ ವಿಭಾಗದ ಮುಖ್ಯಸ್ಥರು ನಿವೇದನೆಯನ್ನು ಪರಿಶೀಲಿಸಿ ಜಂಟಿ ನಿರ್ದೇಶಕರು ಇವರಿಗೆ ಮಂಡಿಸುವರು. ಜಂಟಿ ನಿರ್ದೇಶಕರವರು ಸದರಿ ಪ್ರಸ್ತಾವನೆ/ ನಿವೇದನೆಯನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮ/ ಸುತ್ತೋಲೆ/ ಮಾರ್ಗ ಸೂಚಿಗಳ ಬೆಳಕಿನಲ್ಲಿ ಪರಿಶೀಲಿಸಿ ತಮಗೆ ಪ್ರದತ್ತವಾದ ಅಧಿಕಾರದ ಅಡಿಯಲ್ಲಿ ನಿರ್ಧರಿಸುವದು ಮತ್ತು ಪ್ರಕರಣ ಸಂಶಯತ್ಮಾಕವಾಗಿದ್ದಲ್ಲಿ ಕಡತವನ್ನು ಅಂತಿಮ ನಿರ್ಧಾರಕ್ಕಾಗಿ/ ತೀರ್ಮಾನಕ್ಕಾಗಿ ಕೇಂದ್ರ ಕಛೇರಿಗೆ ಕಳುಹಿಸುವದು. |

| | |
|---|---|
| ಕೈಪಿಡಿ–4 ಕಾರ್ಯನಿರ್ವಹಣೆಗೆ ರೂಪಿಸಿಕೊಂಡಿರುವ ಸೂತ್ರಗಳು | ವಿಷಯ ಪ್ರಸ್ತಾವನೆಯ ತುರ್ತನ್ನು ಅವಲಂಬಿಸಿ ಆಧ್ಯತೆಯ ಮೇರೆಗೆ ಇತ್ಯರ್ಥಗೊಳಿಸುವದು. |
| ಕೈಪಿಡಿ–5 ಇಲಾಖೆ ಹೊಂದಿರುವ ಕರ್ತವ್ಯಗಳನ್ನು ನಿರ್ವಹಿಸಲು ನೌಕರರು ಉಪಯೋಗಿಸುವ ನಿಯಮಗಳು, ನಿಬಂಧನೆಗಳು ಸೂಚನೆಗಳು, ಕೈಪಿಡಿಗಳು ಮತ್ತು ದಾಖಲೆಗಳು. | ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯಂತೆ ಕಾರ್ಯನಿರ್ವಹಿಸುವದು. |
| ಕೈಪಿಡಿ–6 ಇಲಾಖೆ ಹೊಂದಿರುವ ಪ್ರವರ್ಗವಾರು ವಿವರ ಪಟ್ಟಿ. | ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಸುತ್ತೋಲೆಗಳು, ಮುಂತಾದ ಆದೇಶಗಳು. |
| ಕೈಪಿಡಿ–7 ಇಲಾಖೆಯ ಕೆಲಸದ ರೀತಿ, ರಚನೆ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಇರುವ ವ್ಯವಸ್ಥೆ. | ಇಲಾಖೆಗೆ ಸಂಬಂಧಿಸಿದಂತೆ, ಕೈಗಾರಿಕೆಯನ್ನು ಆರಂಭಿಸಲು ತಿಳುವಳಿಕೆ ನೀಡುವದು. ಉದ್ದಿಮೆದಾರರ ಜ್ಞಾಪಕ ವಿವರಣಾ ಪತ್ರ ಭಾಗ–1 ಮತ್ತು ಭಾಗ–2, ಕೈಗಾರಿಕೆಗೆ ಸಂಬಂಧಿಸಿದಂತೆ ಸಹಾಯ ಸೌಲತ್ತುಗಳು ಮುಂತಾದವುಗಳ ಬಗ್ಗೆ ಮಾಹಿತಿ ನೀಡುವದು. ಸಂಬಂಧಿಸಿದ ಘಟಕಗಳಿಗೆ ಭೇಟಿ ನೀಡಿ, ಘಟಕಗಳಿಗೆ ಅವಶ್ಯವಿರುವ ಸಹಾಯ ಸೌಕರ್ಯ ಒದಗಿಸುವದು. |
| ಕೈಪಿಡಿ–8 ಇಲಾಖೆಯಲ್ಲಿರುವ ಮಂಡಳಿಗಳು, ಪರಿಷತ್ತುಗಳು ಸಮಿತಿಗಳು ಸಲಹಾ ಸಮಿತಿಗಳ ಕಾರ್ಯಕಲಾಪಗಳ ಪಟ್ಟಿ | ಕೆ.ಎಸ್.ಎಸ್.ಐ.ಡಿ.ಸಿ., ಕೆ.ಐ.ಎ.ಡಿ.ಬಿ. ಗಳಲ್ಲಿ ನಿವೇಶನ ಮತ್ತು ಮಳಿಗೆಗಳನ್ನು ಉದ್ದಿಮೆಗಳಿಗೆ ನಿಯಮಾನುಸಾರ ಒದಗಿಸುವದು. |
| ಕೈಪಿಡಿ–9 ಇಲಾಖೆಯ ಅಧಿಕಾರಿಗಳ ಮತ್ತು ನೌಕರರ ವಿವರ ಸೂಚಿಕೆ | ವಿವರಗಳು ಅನುಬಂಧ–2ರಲ್ಲಿ ಇವೆ. |
| ಕೈಪಿಡಿ–10 ಇಲಾಖೆಯ ಅಧಿಕಾರಿಗಳು ಮತ್ತು ನೌಕರರ ವೇತನ ಮತ್ತು ಇತರೆ | ವಿವರಗಳು ಅನುಬಂಧ–3 ರಲ್ಲಿ ಇವೆ. |
| ಕೈಪಿಡಿ–11 ಇಲಾಖೆಯ ವಾರ್ಷಿಕ ಆಯವ್ಯಯ ವಿವರ | ಪ್ರತಿ ವರ್ಷ ಇಲಾಖೆವತಿಯಿಂದ ಬೇಕಾಗುವ ಆಯವ್ಯಯ ಅಂದಾಜು ಪತ್ರಿಕೆ ತಯಾರಿಸಿ ಕೇಂದ್ರ ಕಛೇರಿಗೆ ಅನುದಾನ ಬೇಡಿಕೆಗಾಗಿ ವಿವರ ಸಲ್ಲಿಸಿ ಅನುದಾನದಂತೆ ಖರ್ಚು ವೆಚ್ಚ ಭರಿಸಲಾಗುವುದು. |
| ಕೈಪಿಡಿ–12 ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣೆ ಹಾಗೂ ಅನುಷ್ಠಾನ | ಕೈಗಾರಿಕಾ ನೀತಿಯ ಪ್ರಕಾರ ಲಭ್ಯವಿರುವ ಸಹಾಯಧನವನ್ನು ಹೊಸತಾಗಿ ಸ್ಥಾಪಿತವಾದ ಕೈಗಾರಿಕಾ ಘಟಕಗಳಿಗೆ ಜಿಲ್ಲಾ ಮಟ್ಟದ ರಿಯಾಯಿತಿ ಮತ್ತು ಪ್ರೋತ್ಸಾಹಗಳನ್ನು ಮಂಜೂರು ಮಾಡುವ ಸಮಿತಿ ಸಭೆಯಲ್ಲಿ ಮಂಡಿಸಿ ನಿಯಮಾವಳಿ ಪ್ರಕಾರ ಅನುಷ್ಠಾನಗೊಳಿಸಲಾಗುವುದು. |
| ಕೈಪಿಡಿ–13 ಇಲಾಖೆ ನೀಡುತ್ತಿರುವ ವಿನಾಯಿತಿ ಮತ್ತು ಪರವಾನಿಗೆ ಪತ್ರ ಪಡೆದಿರುವವರ, ಅಧಿಕಾರ ಪತ್ರ ನೀಡಿರುವ ವಿವರ. | ಕೈಗಾರಿಕಾ ನೀತಿ ಪ್ರಕಾರ ಭೂ ಪರಿವರ್ತನಾ ಶುಲ್ಕ ವಿನಾಯಿತಿ ಪತ್ರ, ಸ್ಟಾಂಪ್ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ಕಡಿತ, ಪ್ರವೇಶ ತೆರಿಗೆ ವಿನಾಯಿತಿ, ಎ.ಪಿ.ಎಂ.ಸಿ. ಸೆಸ್ ವಿನಾಯಿತಿ ಪ್ರಮಾಣ ಪತ್ರಗಳನ್ನು ನೀಡಲಾಗುತ್ತದೆ. |
| ಕೈಪಿಡಿ–14 ವಿದ್ಯುನ್ಮಾನದಲ್ಲಿ ಪರಿವರ್ತಿಸಿರುವ ಮಾಹಿತಿಯ ವಿವರ | ಭಾಗ–1, ಭಾಗ–2 ಪತ್ರಗಳನ್ನು ವಿದ್ಯುನ್ಮಾನದಲ್ಲಿ ಪರಿವರ್ತಿಸುವದು. |
| ಕೈಪಿಡಿ–15 ಇಲಾಖೆಯಲ್ಲಿ ಮಾಹಿತಿಯನ್ನು ಪಡೆಯುವದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಗಳ ವಿವರಗಳು. | ಇಲಾಖೆಯ ಮಾಹಿತಿ ಕೇಂದ್ರದಲ್ಲಿ ಮಾಹಿತಿ ನೀಡಲಾಗುವುದು. |
| ಕೈಪಿಡಿ–16 ಇಲಾಖೆಯಲ್ಲಿರುವ ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಹುದ್ದೆ ಮತ್ತು ಇತರ ವಿವರಗಳು. | ಎಂ.ಎಲ್. ಹಾಲಳ್ಳಿ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು, 235646, 235811. |

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು.

**ಅನುಬಂಧ–1**

**ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು ಕಛೇರಿಯ ಅಧಿಕಾರಿಗಳ ಮತ್ತು ನೌಕರರ ಕರ್ತವ್ಯಗಳು**

| | |
|---|---|
| ಜಂಟಿ ನಿರ್ದೇಶಕರು | ಜಿಲ್ಲೆಯ ಮುಖ್ಯಸ್ಥರಾಗಿ ಇಲಾಖೆಯ ಕೆಲಸ ಕಾರ್ಯಗಳ ನಿರ್ವಹಣೆ. |
| ಸಹಾಯಕ ನಿರ್ದೇಶಕರು | ವಸ್ತು ಪ್ರದರ್ಶನ, ಕೈಗಾರಿಕಾ ವಿಕಾಸ ಯೋಜನೆ, ವಿಶ್ವ ಯೋಜನೆ, ವಿಶೇಷ ಘಟಕ ಯೋಜನೆ/ ಗಿರಿಜನ ಉಪಯೋಜನೆ, ರಿಯಾಯಿತಿ ಮತ್ತು ಪ್ರೋತ್ಸಾಹಗಳ ಮಂಜೂರಾತಿ, ಕೈಗಾರಿಕಾ ಪ್ರದೇಶ/ ಕೈಗಾರಿಕಾ ವಸಾಹತುಗಳಲ್ಲಿ ಮಳಿಗೆ/ ನಿವೇಶನಗಳ ಹಂಚಿಕೆ, ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ಕಡಿತ, ಭೂ ಪರಿವರ್ತನಾ ಶುಲ್ಕ ವಿನಾಯಿತಿ, ಡಾ: ಸರೋಜಿನಿ ಮಹಿಷಿ ವರದಿ ಅನುಷ್ಠಾನ, ಸಾರ್ವಜನಿಕ ದೂರು ಮತ್ತು ಮಾಹಿತಿ ಹಕ್ಕು, ಸಣ್ಣ ಕೈಗಾರಿಕೆಗಳ ಕ್ಲಸ್ಟರ್ ಅಭಿವೃದ್ಧಿ ಯೋಜನೆ, ನಿಗಮ/ ಮಂಡಳಿಗಳ ಕಾರ್ಯಕ್ರಮಗಳ ಅನುಷ್ಠಾನ ಇವುಗಳ ಕಡತಗಳನ್ನು ಪರಿಶೀಲಿಸಿ ನಿರ್ವಹಿಸುವದು. |
| ಕೈಗಾರಿಕಾ ಉತ್ತೇಜನಾಧಿಕಾರಿ | ಉದ್ದಿಮೆದಾರರ ಜ್ಞಾಪನಾ ವಿವರಣಾ ಪತ್ರ ಭಾಗ–1 ಮತ್ತು ಭಾಗ–2, ಸಹಾಯಧನ ಮಂಜೂರಾತಿ, ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ಕಡಿತ, ಸಾಲ ಪತ್ರಗಳು, ಪ್ರವೇಶ ತೆರಿಗೆ ವಿನಾಯಿತಿ, ಎ.ಪಿ.ಎಂ.ಸಿ. ಸೆಸ್ ವಿನಾಯಿತಿ, ತಾಂತ್ರಿಕ ಉನ್ನತೀಕರಣ, ಅಭಿವೃದ್ಧಿ ಸಾಲ/ ಮಾರ್ಜಿನ್ ಮನಿ ಲೋನ್/ ಎಸ್‌ಎಐ ಲೋನ್/ ರೋಗಗ್ರಸ್ಥ ಘಟಕಗಳಿಗೆ ಮಾರ್ಜಿನ್ ಮನಿ ಸಾಲ, ರೋಗಗ್ರಸ್ಥ ಕೈಗಾರಿಕೆಗಳ ಪುನರುಜೀವನ, ಸೆಮಿನಾರ/ ವರ್ಕ್‌ಸಾಪ್/ ಬೈಯರ್ಸ್–ಸೆಲರ್ಸ್ ಮೀಟ್ ಇವುಗಳ ಕಡತಗಳನ್ನು ಪರಿಶೀಲಿಸಿ ನಿರ್ವಹಿಸುವದು. |
| ಅಧೀಕ್ಷಕರು | ಆಡಳಿತ ವಿಷಯಗಳು, ಪ್ರಧಾನ ಮಂತ್ರಿಗಳ ಉದ್ಯೋಗ ಸೃಜನ ಯೋಜನೆ, ಉದ್ಯಮಶೀಲತಾಭಿವೃದ್ಧಿ ಕಾರ್ಯಕ್ರಮಗಳು/ ಪ್ರಚಾರ/ ಜಾಗೃತಿ ಕಾರ್ಯಕ್ರಮಗಳು/ ಕೌಶಲ್ಯಾಭಿವೃದ್ಧಿ ಕಾರ್ಯಕ್ರಮಗಳು, ರಾಜೀವ್‌ಗಾಂಧಿ ಉದ್ಯಮಿ ಮಿತ್ರ ಯೋಜನೆ ನಿರ್ವಹಿಸುವದು. |
| ಪ್ರಥಮ ದರ್ಜೆ ಸಹಾಯಕರು | ಆಡಳಿತ ವಿಷಯಗಳು, ಹಣಕಾಸು/ ಲೆಕ್ಕ ಪತ್ರ ಹೊಂದಾಣಿಕೆ |
| ಗಣತಿದಾರರು | ಆಡಳಿತ ವಿಷಯಗಳು, ಪ್ರಧಾನ ಮಂತ್ರಿಗಳ ರೋಜಗಾರ್ ಯೋಜನೆ, ಅತೀ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ಗಣತಿ, ಐ.ಐ.ಪಿ. ಡಾಟಾ ಕಡತವನ್ನು ನಿರ್ವಹಿಸುವದು. |
| ಶೀಘ್ರಲಿಪಿಗಾರರು | ಖಾಲಿ |
| ಬೆರಳಚ್ಚುಗಾರರು | ಜಿಲ್ಲಾಧಿಕಾರಿಗಳ ಕಛೇರಿಗೆ ನಿಯೋಜನೆ |
| ವಾಹನ ಚಾಲಕ | ವಾಹನ ಚಾಲನೆ |
| ಗ್ರೂಪ್–ಡಿ | ಕಛೇರಿ ಸ್ವಚ್ಛತೆ, ಟಪಾಲು ಹಂಚಿಕೆ, ಮುಂತಾದ ಕೆಲಸಗಳು. |

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು.

**ಅನುಬಂಧ–2**

**ಇಲಾಖೆಯ ಅಧಿಕಾರಿಗಳ ಮತ್ತು ನೌಕರರ ವಿವರ ಸೂಚಿಕೆ**

| ಕ್ರ.ಸಂ. | ಅಧಿಕಾರಿ/ ಸಿಬ್ಬಂದಿಯ ಹೆಸರು | ಹುದ್ದೆ |
|---|---|---|
| 1. | ಎಂ.ಎಲ್. ಹಾಲಳ್ಳಿ | ಜಂಟಿ ನಿರ್ದೇಶಕರು |
| 2. | ಜಿ.ಹೆಚ್. ಮಹೇಶ | ಸಹಾಯಕ ನಿರ್ದೇಶಕರು (ಪ್ರಭಾರ) |
| 3. | ಎಂ.ಎ.ಸಮೀ | ಕೈಗಾರಿಕಾ ಉತ್ತೇಜನಾಧಿಕಾರಿ |
| 4. | ಸಂಗಪ್ಪ ಈ ಹೊಸೂರು. | ಅಧೀಕ್ಷಕರು |
| 5. | ಮಲ್ಲಣ್ಣ ಹರವಾಳ | ಪ್ರಥಮ ದರ್ಜೆ ಸಹಾಯಕರು |
| 6. | ಶಂಕರಗೌಡ, | ಗಣತಿದಾರರು |
| 7. | ಖಾಲಿ (ಶೀಘ್ರಲಿಪಿಗಾರರು) | ಶೀಘ್ರಲಿಪಿಗಾರರು |
| 8. | ಮೆಹಬೂಬ | ಬೆರಳಚ್ಚುಗಾರ (ಜಿಲ್ಲಾಧಿಕಾರಿಗಳ ಕಛೇರಿಗೆ ನಿಯೋಜನೆ) |
| 9. | ಶರಣಪ್ಪ | ವಾಹನ ಚಾಲಕರು |
| 10. | ಮಹಾದೇವಪ್ಪ | ಗ್ರೂಪ್–ಡಿ |
| 11. | ನಾಗಪ್ಪ | ಗ್ರೂಪ್–ಡಿ |

**ಅನುಬಂಧ–3**

**ಇಲಾಖೆಯ ಅಧಿಕಾರಿಗಳ ಮತ್ತು ನೌಕರರ ವೇತನ ಮತ್ತು ಇತರೆ ಸೂಚಿಕೆ**

| ಕ್ರ.ಸಂ. | ಅಧಿಕಾರಿ/ ಸಿಬ್ಬಂದಿಯ ಹುದ್ದೆ | ಮೂಲವೇತನ (ರೂ.ಗಳಲ್ಲಿ) |
|---|---|---|
| 1. | ಎಂ.ಎಲ್. ಹಾಲಳ್ಳಿ, ಜಂಟಿ ನಿರ್ದೇಶಕರು | 28,275=00 |
| 2. | ಜಿ.ಹೆಚ್. ಮಹೇಶ, ಸಹಾಯಕ ನಿರ್ದೇಶಕರು (ಪ್ರಭಾರ) | 17,250=00 |
| 3. | ಎಂ.ಎ.ಸಮೀ, ಕೈಗಾರಿಕಾ ಉತ್ತೇಜನಾಧಿಕಾರಿ | 19,050=00 |
| 4. | ಸಂಗಪ್ಪ ಈ ಹೊಸೂರು, ಅಧೀಕ್ಷಕರು | 15,200=00 |
| 5. | ಮಲ್ಲಣ್ಣ ಹರವಾಳ, ಪ್ರಥಮ ದರ್ಜೆ ಸಹಾಯಕರು | 11,100=00 |
| 6. | ಶಂಕರಗೌಡ, ಗಣತಿದಾರರು | 11,700=00 |
| 7. | ಖಾಲಿ (ಶೀಘ್ರಲಿಪಿಗಾರರು), | – |
| 8. | ಮೆಹಬೂಬ, ಬೆರಳಚ್ಚುಗಾರ (ಜಿಲ್ಲಾಧಿಕಾರಿಗಳ ಕಛೇರಿಗೆ ನಿಯೋಜನೆ) | 7,625=00 |
| 9. | ಶರಣಪ್ಪ, ವಾಹನ ಚಾಲಕರು | 10,000=00 |
| 10. | ಮಹಾದೇವಪ್ಪ, ಗ್ರೂಪ್–ಡಿ | 7,800=00 |
| 11. | ನಾಗಪ್ಪ, ಗ್ರೂಪ್–ಡಿ | 7,800=00 |

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು.

**ಸಾರ್ವಜನಿಕ ಮಾಹಿತಿ ಅಧಿಕಾರಿಗಳ ನೇಮಕ (ಪ್ರಕರಣ–5)**

| ಕ್ರ. ಸಂ. | ಮೇಲ್ಮನವಿ ಪ್ರಾಧಿಕಾರ | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಾಹಿತಿ ಹಕ್ಕು ಅಧಿನಿಯಮ 2005) ಸೆಕ್ಷನ್–5(1) | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಮಾಹಿತಿ ಹಕ್ಕು ಅಧಿನಿಯಮ 2005) ಸೆಕ್ಷನ್–5 (2) | ಮೊದಲನೇ ಮೇಲ್ಮನವಿ ಪ್ರಾಧಿಕಾರ (ಮಾಹಿತಿ ಹಕ್ಕು ಅಧಿನಿಯಮ 2005) ಸೆಕ್ಷನ್–19(1) |
|---|---|---|---|---|
| 1. | ಡಾ: ರಾಜಕುಮಾರ ಖತ್ರಿ, ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು. | ಎಂ.ಎಲ್.ಹಾಲಳ್ಳಿ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು, ಪೋ–235646. | ಜಿ.ಹೆಚ್. ಮಹೇಶ ಸಹಾಯಕ ನಿರ್ದೇಶಕರು (ಪ್ರಭಾರ), ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು, ಪೋ–235811 | ಡಾ: ರಾಜಕುಮಾರ ಖತ್ರಿ, ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು. |

ಆರ್.1313 ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಚೂರು.

**ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡವಳಿ**

**ವಿಷಯ:** ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ನಂಜದೇವನಪುರ ಗ್ರಾಮದ ಸರ್ವೆ ನಂ.88 ರಲ್ಲಿ 1–20 ಎಕರೆಗೆ ಬ್ಲಾಕ್ ಗ್ರಾನೈಟ್ ಶಿಲೆಗಾಗಿ ಶ್ರೀ ಪಿ.ಎ. ಗೂಳಿ ಚನ್ನಪ್ಪ ಅಲಿಯಾಸ್ ಶಿವಣ್ಣ ಕಲ್ಲುಗಣಿ ಗುತ್ತಿಗೆ ಸಂಖ್ಯೆ:457 ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರ ಸಂಖ್ಯೆ: ಸಿಐ:38: ಎಂಎಂಎನ್–2008, ದಿನಾಂಕ:24.03.2008.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು, ನಂಜದೇವನಪುರ ಗ್ರಾಮದ ಸರ್ವೆ ನಂ.88ರಲ್ಲಿ 1–20 ಎಕರೆ ವಿಸ್ತೀರ್ಣದಲ್ಲಿ ಕಪ್ಪು ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 457ರ ಗುತ್ತಿಗೆಯನ್ನು ಶ್ರೀ ಪಿ.ಎ. ಗೂಳಿ ಚನ್ನಪ್ಪ ಅಲಿಯಾಸ್ ಶಿವಣ್ಣ ಅವರ ಹೆಸರಿನಲ್ಲಿ ದಿನಾಂಕ:24.07.2001 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರೀಯಗೊಳಿಸಿದ ಕಾರಣ ದಿನಾಂಕ:20.12.2007 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಗಭೂಇ:ಡಿಸಿಬಿ:ಕಗಗು:457:2008–09/10409, ದಿನಾಂಕ:18ನೇ ನವೆಂಬರ್, 2008**

ಶ್ರೀ ಪಿ.ಎ. ಗೂಳಿ ಚನ್ನಪ್ಪ ಅಲಿಯಾಸ್ ಶಿವಣ್ಣ ಇವರಿಗೆ ಚಾಮರಾಜನಗರ ಜಿಲ್ಲೆ, ಚಾಮರಾಜನಗರ ತಾಲ್ಲೂಕು ನಂಜದೇವನಪುರ ಗ್ರಾಮದಲ್ಲಿನ ಸರ್ವೆ ನಂ.88ರಲ್ಲಿ 1–20 ಎಕರೆ ಪ್ರದೇಶದಲ್ಲಿ ಕಪ್ಪು ಅಲಂಕಾರಿಕ ಶಿಲೆಗಾಗಿ (ಬ್ಲಾಕ್ ಗ್ರಾನೈಟ್) ಮಂಜೂರಾದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:457 ಅನ್ನು ದಿನಾಂಕ:20.12.2007 ರಿಂದ ರದ್ದುಗೊಳಿಸಲಾಗಿತ್ತು. ಸರ್ಕಾರದ ಆದೇಶ ಸಂಖ್ಯೆ: ಸಿ.ಐ.38: ಎಂ.ಎಂ.ಎನ್. 2008 ದಿನಾಂಕ:24.03.2008ರಲ್ಲಿ ಕಲ್ಲು ಗಣಿ ಗುತ್ತಿಗೆಯನ್ನು ರದ್ದುಗೊಳಿಸಿದ ದಿನಾಂಕ:20.12.2007 ರಿಂದ ಪುನರ್ ಸ್ಥಾಪಿಸಲು ಆದೇಶಿಸಿರುವ ಮೇರೆಗೆ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ರ ನಿಯಮಗಳಡಿ ಮಂಜೂರಾದ ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಮತ್ತು ಅವಧಿ ವಿಸ್ತರಿಸುವ ಯಾವುದೇ ಅಹವಾಲುಗಳನ್ನು ಮನ್ನಿಸಲಾಗುವುದಿಲ್ಲ. ನಿಯಮಾವಳಿಯಂತೆ ಮಂಜೂರಾದ ಅವಧಿಯವರೆಗೆ ಮುಂದುವರಿಯುತ್ತದೆ.

ನಿರ್ದೇಶಕರು.

ಪಿ.ಆರ್.1309 ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರ ನ್ಯಾಯಾಲಯದಲ್ಲಿ**

**ಎ.ಆರ್.21/ಬ/ಸಿ.ಇ.ಪಿ.(ವ)372 ಹಾಗೂ 373/2006–07, ದಿನಾಂಕ:7ನೇ ನವೆಂಬರ್, 2008**

**ವಿಷಯ:** ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರ ಅಮಲ್ಜಾರಿ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಸ್ಥಿರಾಸ್ತಿಯನ್ನು 1960ನೇ ಸಹಕಾರ ಸಂಘಗಳ ನಿಯಮಗಳ ನಿಯಮ 38(5)(ಎ) ರನ್ವಯ ಮಾರಾಟ ಸ್ಥಿರೀಕರಣಗೊಳಿಸುವ ಬಗ್ಗೆ.

**ಉಲ್ಲೇಖ:**1) ದಾವಾ ಸಂಖ್ಯೆ: ಎ(ಐ:ಎಂ)ಡಿ2/440/2001–02
ಅಮಲ್ಜಾರಿ ಸಂಖ್ಯೆ: ಎಆರ್‌ಇ/ಯುಬಿಎಫ್/ಆರ್‌ಓ/1355/05–06
ಎಆರ್‌ಇ/ಯುಬಿಎಫ್/ಆರ್‌ಓ/825/06–07 (ವ)
(ವ) 372/06–07.
(2) ದಾವಾ ಸಂಖ್ಯೆ: ಎ(ಐ:ಎಂ)ಡಿ2/444/2001–02
ಅಮಲ್ಜಾರಿ ಸಂಖ್ಯೆ: ಎಆರ್‌ಇ/ಯುಬಿಎಫ್/ಆರ್‌ಓ/1356/05–06
ಎಆರ್‌ಇ/ಯುಬಿಎಫ್/ಆರ್‌ಓ/826/06–07 (ವ)
(ವ) 373/06–07
(3) ದಾವಾ ಸಂಖ್ಯೆ: ಎ(ಐ:ಎಂ)ಡಿ2/442/2001–02
(4) ಮಾರಾಟಾಧಿಕಾರಿಯವರ ವರದಿ ದಿನಾಂಕ:11.10.2008.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿಮಿಟೆಡ್, ಶಿರಸಿ ................. ಅವಾರ್ಡುದಾರ

**–ವಿರುದ್ಧ–**

ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ, ಹೊಸಪೇಟೆ ರೋಡ್, ಶಿರಸಿ ................. ತೀರ್ಪು ಬಾಕಿದಾರ

**ಪೀಠಿಕೆ:**

ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ, ಹೊಸಪೇಟೆ ರೋಡ್, ಶಿರಸಿ ಇವರು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಶಿರಸಿ ಉಪನಗರ ಶಾಖೆಯಿಂದ (1) ದಿನಾಂಕ:10.06.1997 ರಂದು ರೂ.1,75,000/– (ರೂ. ಒಂದು ಲಕ್ಷ ಎಪ್ಪತ್ತೈದು ಸಾವಿರ ಮಾತ್ರ), (2) ದಿನಾಂಕ:16.03.2000 ರಂದು ರೂ.2,00,000/– (ರೂ.ಎರಡು ಲಕ್ಷ ಮಾತ್ರ) ಹಾಗೂ (3) ದಿನಾಂಕ:19.03.1999 ರಂದು ರೂ.3,15,000/– (ರೂ. ಮೂರು ಲಕ್ಷ ಹದಿನೈದು ಸಾವಿರ ಮಾತ್ರ) ಗಳನ್ನು ಸ್ಥಿರಾಸ್ತಿ ಅಡಮಾನ ಮಾಡಿ ಸಾಲವಾಗಿ ಪಡೆದು ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಯಮಗಳ ಪ್ರಕಾರ ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ನ್ಯಾಯಾಲಯದಲ್ಲಿ ದಾವಾ ಸಂಖ್ಯೆ: (1) ಎ (ಐ:ಎಂ):ಡಿ–2/440/01–02, (2) ಎ(ಐ:ಎಂ):ಡಿ–2/444/01–02, ಹಾಗೂ (3) ಎ (ಐ:ಎಂ):ಡಿ–2/442/01–02 ರಂತೆ ದಾವಾ ಹೂಡಿ ಆದೇಶ ಪಡೆದಿದ್ದರೂ ಸಾಲದ ಬಾಕಿ ಮರುಪಾವತಿ ಆಗಿರುವುದಿಲ್ಲ. ನ್ಯಾಯಾಲಯದಿಂದ ಪಡೆದ ಸದರಿ ಡಿಕ್ರಿಗಳ ಅನ್ವಯ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳಡಿ ಸಹಕಾರಿಗಳ ಸಹಾಯಕ ರಿಜಿಸ್ಟ್ರಾರ್ (ನಿ.441) ಹಾಗೂ ವಸೂಲಾಧಿಕಾರಿಗಳು, ಕ.ರಾ.ಸ.ಪ. ಬ್ಯಾಂಕುಗಳ ಮಹಾ ಮಂಡಳ ನಿಯಮಿತ, ಪ್ರಾಂತೀಯ ಕಛೇರಿ ಹುಬ್ಬಳ್ಳಿ ರವರಲ್ಲಿ ಮೇಲಿನ ಅ.ನಂ.(1) ಹಾಗೂ (2)ರ ಅವಾರ್ಡುಗಳನ್ನು ಸಿಇಪಿ

ಸಂಖ್ಯೆ:ಎಆರ್‌ಇ/ ಯುಬಿಎಫ್/ ಪ್ರಾ.ಕ.1355/2005–06 ಹಾಗೂ ಸಿಇಪಿ ಸಂಖ್ಯೆ: ಎಆರ್‌ಇ/ ಯುಬಿಎಫ್/ ಪ್ರಾ.ಕ./1356/ 2005–06 ರಂತೆ ಮೂಲತ: ದಾಖಲ್ ಮಾಡಿದ್ದು ಮುಂದಿನ ವಸೂಲಿ ಕ್ರಮದ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ಕಛೇರಿಗೆ ವರ್ಗಾವಣೆಗೊಂಡು ಅಮಲ್ಜಾರಿ ಪ್ರಕರಣ ನಂಬರ್ (ವ) 372/06–07 ಹಾಗೂ (ವ) 373/06–07 ದಾಖಲಾದಂತೆ ಸದರಿ ಅಮಲ್ಜಾರಿ ಪ್ರಕರಣಗಳನ್ನು ಬ್ಯಾಂಕಿನ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಕೇಂದ್ರ ಕಛೇರಿ, ಶಿರಸಿ ಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಸಾಲಕ್ಕೆ ಅಡವು ಮಾಡಿದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ದಿನಾಂಕ:29.07.2008ರಂದು ಸಾರ್ವಜನಿಕ ಮುಂದುವರಿದ ಬಹಿರಂಗ ಹರಾಜಿಗೆ ತರಲಾಗಿದ್ದು, ಸದರಿ ದಿನ ನಡೆಸಿದ ಹರಾಜಿನಲ್ಲಿ 5 ಜನ ಬಿಡ್ಡುದಾರರು ಭಾಗವಹಿಸಿದ್ದು ಈ ಪೈಕಿ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ, ಹುಬ್ಬಳ್ಳಿ ರೋಡ್, ಶಿರಸಿ ಇವರು ರೂ.10,00,000/– (ರೂ.ಹತ್ತು ಲಕ್ಷ ಮಾತ್ರ) ಗಳಿಗೆ ಬಿಡ್ಡು ಮಾಡಿದ್ದು, ಅತ್ಯಧಿಕ ಬಿಡ್ಡುದಾರರಾಗಿರುತ್ತಾರೆ.

ಡಿಕ್ರಿ ಆದೇಶಗಳ ಮತ್ತು ಅಮಲ್ಜಾರಿ ಅರ್ಜಿಗಳನ್ವಯ ಒಟ್ಟು ಅಸಲು ರೂ.5,25,000/– ಹಾಗೂ ಬಡ್ಡಿ ಮತ್ತು ಇತರ ವೆಚ್ಚಗಳು ರೂ.7,31,299/–, ಹೀಗೆ ಒಟ್ಟು ರೂ.12,56,299/– ಗಳು ಬ್ಯಾಂಕಿಗೆ ಬಾಕಿ ಬರಬೇಕಾಗಿರುತ್ತದೆ. ರೂ.10,00,000/– ಗಳ ಅತಿ ಹೆಚ್ಚಿನ ಬಿಡ್ಡುದಾರರಾದ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ ರವರು ಬಿಡ್ಡಿನ ಮೊತ್ತದ ಶೇಕಡಾ 15ರ ಬಾಬ್ತು ರೂ.1,50,000/– (ರೂ.ಒಂದು ಲಕ್ಷ ಐವತ್ತು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ಬ್ಯಾಂಕಿನ ಪ್ರಧಾನ ಶಾಖೆ ಶಿರಸಿ ಇದರಲ್ಲಿ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ರವರ ಅಮಾನತು ಖಾತೆಗೆ ಪಾವತಿ ಮಾಡಿರುತ್ತಾರೆ. ಉಳಿಕೆ ಬಾಕಿ ಬಿಡ್ಡು ಮೊತ್ತ ರೂ.8,50,000/– (ರೂ.ಎಂಟು ಲಕ್ಷ ಐವತ್ತು ಸಾವಿರ ಮಾತ್ರ), ಹಾಗೂ ಮುದ್ರಾಂಕ ಶುಲ್ಕ ರೂ.84,000/– (ರೂ. ಎಂಬತ್ನಾಲ್ಕು ಸಾವಿರ ಮಾತ್ರ) ಗಳನ್ನು 45 ದಿನಗಳ ಅವಧಿಯ ಒಳಗೆ ದಿನಾಂಕ:12.09.2008 ರಂದು ಬ್ಯಾಂಕಿನ ಪ್ರಧಾನ ಶಾಖೆಯಲ್ಲಿ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ರವರ ಅಮಾನತ ಖಾತೆಗೆ ಜಮಾ ಮಾಡಿರುತ್ತಾರೆ.

ಖರೀದಿಸಿದ ಸ್ಥಿರಾಸ್ತಿಗೆ ದಿ ಕೆ.ಡಿ.ಸಿ.ಸಿ. ಬ್ಯಾಂಕ್ ಲಿ., ಶಿರಸಿ ಮತ್ತು ಚೇತನಾ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರಿಗೆ ಬರತಕ್ಕ ರಕಮಿನ ಬಗ್ಗೆ ಜಪ್ತಿ ಭೋಜಾ ದಾಖಲಿಸಿದ್ದು ಕಂಡುಬಂದಿದ್ದು ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇವರು ಮೇಲಿನ ಎರಡೂ ಬ್ಯಾಂಕಿನೊಂದಿಗೆ ಅವರಿಗೆ ಬರತಕ್ಕ ತೀರ್ಪು ಬಾಕಿ ರಖಂ ಬಗ್ಗೆ ಹೊಂದಾಣಿಕೆಯನ್ನು ಮಾಡಿಕೊಂಡಿದ್ದು, ಇದರಂತೆ ದಿ ಕೆ.ಡಿ.ಸಿ.ಸಿ. ಬ್ಯಾಂಕ್ ಲಿ., ಶಿರಸಿ ರವರ ಪತ್ರ ನಂಬರ್ ಸಿಇಪಿ/848/455/2005–06 ದಿನಾಂಕ:01.10.2008ರ ಪ್ರಕಾರ ರೂ.63,157/– (ರೂ. ಅರವತ್ಮೂರು ಸಾವಿರದ ಒಂದು ನೂರಾ ಐವತ್ತೇಳು ಮಾತ್ರ) ಹಾಗೂ ಚೇತನಾ ಸಹಕಾರಿ ಬ್ಯಾಂಕ್ ಲಿ., ಶಿರಸಿ ರವರ ಪತ್ರ ನಂಬರ್ 36/2008–09 ದಿನಾಂಕ:10.10.2008ರ ಪ್ರಕಾರ ರೂ.50,000/– (ರೂ. ಐವತ್ತು ಸಾವಿರ ಮಾತ್ರ) ಗಳನ್ನು ಸಂದಾಯ ಮಾಡಿದ್ದಲ್ಲಿ ಜಪ್ತಿ ಭೋಜಾ ಕಡಿಮೆ ಮಾಡಿಕೊಡುವುದಾಗಿ ಒಪ್ಪಿಗೆ ಪತ್ರ ನೀಡಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಮುಂದುವರಿದ ಬಹಿರಂಗ ಹರಾಜಿನ ದಿನಾಂಕ:29.07.2008ರ ವರೆಗೆ ಒಟ್ಟು ರಖಂ ರೂ.12,56,299/– ಬರತಕ್ಕದ್ದಿರುವುದಾಗಿ ಹರಾಜಿನ ದಿನಾಂಕದಂದು ಶಿರಸಿ ಉಪನಗರ ಶಾಖೆಯ ಶಾಖಾಧಿಕಾರಿಗಳು ಲಿಖಿತವಾಗಿ ಸಲ್ಲಿಸಿದ್ದು ಇರುತ್ತದೆ. ಮಾರಾಟಾಧಿಕಾರಿಗಳು ಸದರಿ ಆಸ್ತಿಯನ್ನು ಅತ್ಯಧಿಕ ಬಿಡ್ ರಖಂ ಆದ ರೂ.10,00,000/– ಗಳಿಗೆ ಮುಂದುವರಿದ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿದ್ದು ಇರುತ್ತದೆ. ಅಲ್ಲದೆ ಸದರಿ ಬಿಡ್ ರಖಂನಲ್ಲಿ ದಿ ಕೆ.ಡಿ.ಸಿ.ಸಿ. ಬ್ಯಾಂಕ್ ಲಿ., ಶಿರಸಿ ರವರಿಗೆ ರೂ.63,157/– ಹಾಗೂ ಚೇತನಾ ಸಹಕಾರಿ ಬ್ಯಾಂಕ್ ಲಿ., ಶಿರಸಿ ರವರಿಗೆ ರೂ.50,000/– ನೀಡುವ ಬಗ್ಗೆ ಒಪ್ಪಂದ ಮಾಡಿಕೊಂಡಿರುವುದರಿಂದ ಡಿಕ್ರಿಧಾರ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿಗೆ ಸದರಿ ವ್ಯವಹಾರದಿಂದ ಕೇವಲ ರೂ.8,86,843/– ಜಮಾ ಬಂದಂತಾಗುವುದರಿಂದ, ಅಮಲ್ಜಾರಿ ಪ್ರಕರಣಗಳಲ್ಲಿ ಭಾಗಶಃ ರಖಂ ಜಮಾ ಬಂದಂತಾಗುವುದರಿಂದ ಪ್ರಕರಣಗಳಲ್ಲಿ ಬರತಕ್ಕ ಉಳಿದ ತೀರ್ಪು ಬಾಕಿ ರಖಂ ವಸೂಲಿ ಬಗ್ಗೆ ಪ್ರಕರಣಗಳನ್ನು ಊರ್ಜಿತ ವಿಡುವುದು ಸೂಕ್ತವಿರುತ್ತದೆ ಎಂದು ಮಾರಾಟಾಧಿಕಾರಿಗಳು ತಿಳಿಸಿರುತ್ತಾರೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ:29.07.2008ರಂದು ನಡೆಸಿದ ಸಾರ್ವಜನಿಕ ಮುಂದುವರಿದ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ತೀರ್ಪು ಬಾಕಿದಾರರಾದ ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ್ ರವರ ಸ್ಥಿರಾಸ್ತಿಯನ್ನು ಶ್ರೀ ಕೆ. ಅಬ್ದುಲ್‌ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ್ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಮುಂದುವರಿದ ಬಹಿರಂಗ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (4) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ:29.07.2008ರಂದು ನಡೆಸಿದ ಮುಂದುವರಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಮುಂದುವರಿದ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು ಐದೂ ಜನ ಬಿಡ್ಡುದಾರರು ಭಾಗವಹಿಸಿದ್ದು ಈ

ಪೈಕಿ ಅತ್ಯಧಿಕ ಬಿಡ್ಡುದಾರರಾದ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ ಇವರಿಗೆ ರೂ.10,00,000/– (ರೂ.ಹತ್ತು ಲಕ್ಷ ಮಾತ್ರ) ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಬಹಿರಂಗ ಹರಾಜು ನಡೆದ 30 ದಿನಗಳ ಅವಧಿಯೊಳಗಾಗಿ ಬಾಕಿದಾರ ಅಥವಾ ಆಸ್ತಿಯಲ್ಲಿ ಹಿತಾಸಕ್ತಿಯುಳ್ಳವರಿಂದ ಬಾಕಿ ರಖಂನ್ನು ಡಿಕ್ರಿದಾರ ಬ್ಯಾಂಕಿಗೆ ಭರಣ ಮಾಡಿ ಲಿಲಾವನ್ನು ರದ್ದುಪಡಿಸುವಂತೆ ಕೋರಿ ಯಾವುದೇ ಅರ್ಜಿ ಸಲ್ಲಿಸಿದ್ದು ಇರುವುದಿಲ್ಲ ಲಿಲಾವು ಆದ 45 ದಿನಗಳ ನಂತರದಲ್ಲಿ ತೀರ್ಪು ಬಾಕಿದಾರನ ಪತ್ನಿ ಹಾಗೂ ಇಬ್ಬರು ಹೆಣ್ಣು ಮಕ್ಕಳು ಶಿರಸಿ ಸಿವಿಲ್ ನ್ಯಾಯಾಲಯದಲ್ಲಿ ದಾವಾ ನಂಬರ್ 195/2008 ದಾಖಲ್ ಮಾಡಿದ್ದು ಇರುತ್ತದೆ. ನ್ಯಾಯಾಲಯವು ಈ ದಾವೆಯಲ್ಲಿ ಬ್ಯಾಂಕಿನ ವಿರುದ್ಧವಾಗಲಿ, ಮಾರಾಟಾಧಿಕಾರಿಗಳ ವಿರುದ್ಧವಾಗಲಿ ಅಥವಾ ವಸೂಲಾಧಿಕಾರಿಗಳ ವಿರುದ್ಧವಾಗಲಿ ಯಾವುದೇ ತಡೆಯಾಜ್ಞೆ ಆದೇಶವನ್ನು ಮಾಡದೇ ಇರುವುದರಿಂದ ಕಾಯ್ದೆಯಂತೆ ಮುಂದಿನ ಕ್ರಮ ನಡೆಯಿಸಲು ಯಾವುದೇ ಕಾಯದೆ ಸಮಸ್ಯೆ ಇರುವುದಿಲ್ಲ ಎಂಬುದಾಗಿ ಈ ದಾವೆಯಲ್ಲಿ ಬ್ಯಾಂಕಿನ ಪರವಾಗಿ ವಾದಿಸುತ್ತಿರುವ ವಕೀಲರು ತಮ್ಮ ಕಾನೂನು ಅಭಿಪ್ರಾಯ ತಿಳಿಸಿರುತ್ತಾರೆ. ಹೀಗಿರುವಲ್ಲಿ ದಿನಾಂಕ:29.07.2008ರಂದು ನಡೆಯಿಸಲಾದ ಮುಂದುವರಿದ ಸ್ಥಿರಾಸ್ತಿ ಬಹಿರಂಗ ಹರಾಜನ್ನು ಖಾಯಂಗೊಳಿಸಿ ಅತ್ಯಧಿಕ ಬಿಡ್‌ದಾರನಿಗೆ ಸದರಿ ಆಸ್ತಿಯ ಮೇಲಿನ ಎಲ್ಲಾ ಭೋಜಾ ವ ಶರ್ತುಗಳನ್ನು ಕಡಿಮೆ ಮಾಡಿಸಿ ಆಸ್ತಿ ವರ್ಗಾವಣೆ ಮಾಡುವ ಬಗ್ಗೆ ಆಸ್ತಿ ಹರಾಜು ಸ್ಥಿರೀಕರಣ ಆದೇಶ ಹಾಗೂ ವಿಕ್ರಿ ಪ್ರಮಾಣ ಪತ್ರ ನೀಡುವ ಬಗ್ಗೆ ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ, ಮಾರಾಟಾಧಿಕಾರಿಗಳು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬರುವುದರಿಂದ ಈ ಕೆಳಗಿನ ಸ್ಥಿರೀಕರಣದ ಆದೇಶ ಹೊರಡಿಸಲಾಗಿದೆ.

**ಆದೇಶ**

1960ರ ಕರ್ನಾಟಕ ಸಹಕಾರ ಸಂಘಗಳ ನಿಯಮ 38(6)ರನ್ವಯ ಇದರಲ್ಲಿ ಡಿಕ್ರಿದಾರ ಬ್ಯಾಂಕಿಗೆ ತೀರ್ಪು ಬಾಕಿದಾರನಿಂದ ಸಂದಾಯವಾಗತಕ್ಕ ಬಾಕಿ ರಖಂಗಳ ಬಗ್ಗೆ ದಿನಾಂಕ:29.07.2008 ರಂದು ಅತ್ಯಧಿಕ ಬಿಡ್ಡುದಾರರಾದ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ, ಹುಬ್ಬಳ್ಳಿ ರೋಡ್, ಶಿರಸಿ ಇವರ ಹೆಸರಿಗೆ ರೂ.10,00,000/– (ರೂ. ಹತ್ತು ಲಕ್ಷ ಮಾತ್ರ) ಗಳಿಗೆ ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಮುಂದುವರಿದ ಬಹಿರಂಗ ಹರಾಜಿನ ಮೂಲಕ ಮಾರಾಟ ಮಾಡಿರುವುದನ್ನು ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ. ಅದಲ್ಲದೇ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರಲ್ಲಿ ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಹಾಗೂ ವಸೂಲಾಧಿಕಾರಿಗಳು ಇವರ ಅಮಾನತ ಖಾತೆಯಲ್ಲಿ ಜಮಾ ಇರುವ ಒಟ್ಟು ರೂ.10,84,000/– (ರೂ. ಹತ್ತು ಲಕ್ಷ ಎಂಭತ್ನಾಲ್ಕು ಸಾವಿರ ಮಾತ್ರ) ದಲ್ಲಿ ಬಾಕಿದಾರನ ಸಾಲ ಖಾತೆಗಳಿಗೆ ರೂ.8,86,843/– (ರೂ. ಎಂಟು ಲಕ್ಷ ಎಂಭತ್ತಾರು ಸಾವಿರದ ಎಂಟುನೂರಾ ನಲ್ವತ್ಮೂರು ಮಾತ್ರ) ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ರಖಂ ರೂ.1,97,157/– ರೂ. ಒಂದು ಲಕ್ಷ ತೊಂಭತ್ತೇಳು ಸಾವಿರದ ಒಂದು ನೂರಾ ಐವತ್ತೇಳು ಮಾತ್ರ) ಗಳಲ್ಲಿ ರೂ.63,157/– (ರೂ.ಅರ್ವತ್ಮೂರು ಸಾವಿರದ ಒಂದು ನೂರಾ ಐವತ್ತೇಳು ಮಾತ್ರ) ಗಳನ್ನು ದಿ ಕೆ.ಡಿ.ಸಿ.ಸಿ. ಬ್ಯಾಂಕ್ ಲಿ., ಶಿರಸಿ ಇದರಲ್ಲಿ ಇರುವ ಬಾಕಿದಾರನ ಸಾಲದ ಖಾತೆ ಜಮಾ ಕೊಡಲು ಹಾಗೂ ರೂ.50,000/– (ರೂ. ಐವತ್ತು ಸಾವಿರ ಮಾತ್ರ) ಗಳನ್ನು ಚೇತನಾ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರಲ್ಲಿ ಇರುವ ಬಾಕಿದಾರನ ಸಾಲದ ಖಾತೆಗೆ ಜಮಾ ಕೊಡಲು ಹಾಗೂ ಇನ್ನುಳಿದ ರೂ.84,000/– (ರೂ.ಎಂಭತ್ನಾಲ್ಕು ಸಾವಿರ ಮಾತ್ರ) ಗಳನ್ನು ಮುದ್ರಾಂಕ ಶುಲ್ಕಕ್ಕೆ ಭರಣ ಮಾಡಲು ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ಹೊಸಪೇಟೆ ರಸ್ತೆಯಲ್ಲಿರುವ ಸ್ಥಿರಾಸ್ತಿ ಸಿಟಿ ಸರ್ವೇ ನಂಬರ್ 193/4, ಕ್ಷೇತ್ರ: 262 ಚೌ.ಯಾರ್ಡ್ ಪೈಕಿ 240 2/9 ಚೌ.ಯಾರ್ಡ್ ಹಾಗೂ ಇದರಲ್ಲಿ ಇರತಕ್ಕ ಇಮಾರತು ಸಹಿತ, ಇದರ ಚೆಕ್ಕುಬಂದಿ ಈ ಕೆಳಗಿನಂತಿರುತ್ತದೆ.

ಉತ್ತರಕ್ಕೆ: ಸಿಟಿ ಸರ್ವೇ ನಂಬರ್ 193/2

ದಕ್ಷಿಣಕ್ಕೆ: ಇದೇ ಸರ್ವೇ ನಂಬರದ ಪೈಕಿ ಶ್ರೀ ಗಣಪತಿ ಮಹಾಬಲೇಶ್ವರ ಹೆಗಡೆ ಹಾಗೂ ಶ್ರೀಮತಿ ಸುಮಂಗಲಾ ಮಹಾಬಲೇಶ್ವರ ಜೋಶಿ ಇವರ ಜಾಗದ ಗಡಿ.

ಪೂರ್ವಕ್ಕೆ: ಸಿಟಿ ಸರ್ವೇ ನಂಬರ್ 193/12

ಪಶ್ಚಿಮಕ್ಕೆ: ಸಿಟಿ ಸರ್ವೇ ನಂಬರ್ 191

ಮಾರಾಟದ ಮೊಬಲಗು: ರೂ.10,00,000/–

ಮಾರಾಟ ಮಾಡಿದ ದಿನಾಂಕ:29.07.2008.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:07.11.2008 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ನಮೂನೆ ಕ್ರಮಾಂಕ–10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ನೋಂದಣಿ ಶುಲ್ಕದ ವಿವರ:**

ಚಲನ ರಶೀದಿ ನಂಬರ್: 342514
ದಿನಾಂಕ: 17.11.2008
ರಖಂ : 84000=00
ಶಾಖೆ: ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಶಿರಸಿ.
(1) ದಾವಾ ಸಂಖ್ಯೆ: ಎ(ಐ:ಎಂ)ಡಿ2/440/2001–02
ಅಮಲ್ಜಾರಿ ಸಂಖ್ಯೆ:ಎಆರ್‌ಇ/ಯುಬಿಎಫ್/ಆರ್‌ಓ/1355/05–06
ಎಆರ್‌ಇ/ಯುಬಿಎಫ್/ಆರ್‌ಓ/825/06–07 (ವ)
(ವ) 372/06–07.
(2) ದಾವಾ ಸಂಖ್ಯೆ: ಎ(ಐ:ಎಂ)ಡಿ2/444/2001–02
ಅಮಲ್ಜಾರಿ ಸಂಖ್ಯೆ:ಎಆರ್‌ಇ/ಯುಬಿಎಫ್/ಆರ್‌ಓ/1356/05–06
ಎಆರ್‌ಇ/ಯುಬಿಎಫ್/ಆರ್‌ಓ/826/06–07 (ವ)
(ವ) 373/06–07

ಹೆಸರು: ಶ್ರೀ ಜಿ.ಆರ್. ವಿಜಯಕುಮಾರ,
ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.
ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿಮಿಟೆಡ್, ಶಿರಸಿ .................. ಡಿಕ್ರಿದಾರ

–ವಿರುದ್ಧ–

ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ, ಹೊಸಪೇಟೆ ರೋಡ್, ಶಿರಸಿ .................. ತೀರ್ಪುಬಾಕಿದಾರ

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರ ಕನ್ನಡ ಜಿಲ್ಲಾ ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ರಹವಾಸಿ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ್, ಹುಬ್ಬಳ್ಳಿ ರೋಡ್, ಶಿರಸಿ ಇವರು ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ನಿವಾಸಿ ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ, ಹೊಸಪೇಟೆ ರೋಡ್, ಶಿರಸಿ, ಇವರಿಂದ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ ಇದರ ಶಿರಸಿ ಉಪನಗರ ಶಾಖೆಗೆ ಸಂದಾಯವಾಗತಕ್ಕ ಬಾಕಿ ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲು ಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ: (1) ಸಿಇಪಿ/ಏಆರ್‌ಇ/ ಯುಬಿಎಫ್/ ಆರ್‌ಓ/ 1355/05–06, ಸಿಇಪಿ/ಏಆರ್‌ಇ/ ಯುಬಿಎಫ್/ ಆರ್‌ಓ/825/06–07(ವ), (ವ) 372/06–07 ಹಾಗೂ (2) ಸಿಇಪಿ/ಏಆರ್‌ಇ/ ಯುಬಿಎಫ್/ ಆರ್‌ಓ/1356/ 05–06, ಸಿಇಪಿ/ ಏಆರ್‌ಇ/ ಯುಬಿಎಫ್/ಆರ್‌ಓ/826/06–07 (ವ), (ವ) 373/06–07 ನೇದರ ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನು ಸಾಲಕ್ಕೆ ಒತ್ತೆ ನೀಡಿದ ಸ್ಥಿರಾಸ್ತಿ ಹಾಗೂ ಅದರಲ್ಲಿರುವ ಇಮಾರತು ಸಹಿತ ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಕೇಂದ್ರ ಕಛೇರಿ, ಶಿರಸಿ ಇವರು ನಡೆಸಿದ ಮುಂದುವರಿದ ಜಾಹೀರ ಲಿಲಾವಿನಲ್ಲಿ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ, ಹುಬ್ಬಳ್ಳಿ ರೋಡ್, ಶಿರಸಿ ಇವರು ಖರೀದಿಸಿ, ಖರೀದಿ ರಖಂ ರೂ.10,00,000/– (ರೂ. ಹತ್ತು ಲಕ್ಷ ಮಾತ್ರ) ವನ್ನು ಪಾವತಿ ಮಾಡಿರುತ್ತಾರೆ ಮತ್ತು ಸದ್ರಿ ವಿಕ್ರಿಯು ನನ್ನಿಂದ ದಿನಾಂಕ:07.11.2008 ರಂದು ಖಾಯಂ ಮಾಡಲ್ಪಟ್ಟಿರುತ್ತದೆ.

**ಸ್ಥಿರಾಸ್ತಿಗಳ ಅನುಬಂಧ:**

ನೋಂದಣಿ ಜಿಲ್ಲಾ : ಉತ್ತರ ಕನ್ನಡ
ತಾಲ್ಲೂಕು : ಶಿರಸಿ
ಗ್ರಾಮ : ಶಿರಸಿ

**ಸ್ಥಿರಾಸ್ತಿಗಳ ವರ್ಣನೆ**

| | |
|---|---|
| ಉತ್ತರಕ್ಕೆ: | ಸಿಟಿ ಸರ್ವೇ ನಂಬರ್ 193/2 |
| ದಕ್ಷಿಣಕ್ಕೆ: | ಇದೇ ಸರ್ವೇ ನಂಬರದ ಪೈಕಿ ಶ್ರೀ ಗಣಪತಿ ಮಹಾಬಲೇಶ್ವರ ಹೆಗಡೆ ಹಾಗೂ ಶ್ರೀಮತಿ ಸುಮಂಗಲಾ ಮಹಾಬಲೇಶ್ವರ ಜೋಶಿ ಇವರ ಜಾಗದ ಗಡಿ. |
| ಪೂರ್ವಕ್ಕೆ: | ಸಿಟಿ ಸರ್ವೇ ನಂಬರ್ 193/12 |
| ಪಶ್ಚಿಮಕ್ಕೆ: | ಸಿಟಿ ಸರ್ವೇ ನಂಬರ್ 191 |

ಸಿ.ಟಿ. ಸರ್ವೇ ನಂ.: 193/4
ಕ್ಷೇತ್ರ : 262 ಚೌ. ಯಾರ್ಡ್ ಪೈಕಿ 240 2/9 ಚೌ.ಯಾರ್ಡ್ ಸದರಿ ಆಸ್ತಿಯಲ್ಲಿ ಇರತಕ್ಕ ಇಮಾರತು ಸಹಿತ.

ವಿಕ್ರಿ ಕಿಮ್ಮತ್ತು ಅಂತೂ ರೂ.10,00,000/– (ರೂಪಾಯಿ ಹತ್ತು ಲಕ್ಷ ಮಾತ್ರ)

ಮಾರಾಟದ ದಿನಾಂಕ:29.07.2008.

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ:17.11.2008ರಂದು ಕೊಡಲ್ಪಟ್ಟಿತು.

ಸ್ಥಳ: ಶಿರಸಿ

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

ಯಥಾನಕಲು:
ಇದರ ಯಥಾ ನಕಲುಗಳನ್ನು ಅಭಿನಂದನೆಗಳೊಂದಿಗೆ
(1) ಮಾನ್ಯ ತಹಸೀಲ್ದಾರರು ಹಾಗೂ ನಗರ ಮೋಜಣಾಧಿಕಾರಿಗಳು, ಶಿರಸಿ ರವರಿಗೆ,
(2) ಹಿರಿಯ ಉಪನೋಂದಣಾಧಿಕಾರಿಗಳು, ಶಿರಸಿ ರವರಿಗೆ.

ಈ ವಿಕ್ರಿ ಪ್ರಮಾಣ ಪತ್ರದಲ್ಲಿ ನಮೂದಿಸಿದ ಸ್ಥಿರಾಸ್ತಿಗಳ ಕುರಿತು ಸಂಬಂಧಿಸಿದ ದಾಖಲೆಗಳಲ್ಲಿ ಅವಶ್ಯಕ ಬದಲಾವಣೆ ಆಗುವಂತೆ ವ್ಯವಸ್ಥೆ ಮಾಡಬೇಕಾಗಿ ಕೋರಿದೆ.

ಸ್ಥಳ: ಶಿರಸಿ
ದಿನಾಂಕ:17.11.2008

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ರವರ ನ್ಯಾಯಾಲಯದಲ್ಲಿ**

**ಫಾರ್ಮ ನಂ.11**

**38ನೇ ಯ ರೂಲಿನ (7) ಕಲಂ**

**ಸ್ಥಿರಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

(1) ದಾವಾ ಸಂಖ್ಯೆ: ಎ(ಐ:ಎಂ)ಡಿ2/440/2001–02
ಅಮಲ್ಜಾರಿ ಸಂಖ್ಯೆ: ಎಆರ್‌ಇ/ಯುಬಿಎಫ್/ಆರ್‌ಓ/1355/05–06
ಎಆರ್‌ಇ/ಯುಬಿಎಫ್/ಆರ್‌ಓ/825/06–07 (ವ)
(ವ) 372/06–07.

(2) ದಾವಾ ಸಂಖ್ಯೆ: ಎ(ಐ:ಎಂ)ಡಿ2/444/2001–02
ಅಮಲ್ಜಾರಿ ಸಂಖ್ಯೆ: ಎಆರ್‌ಇ/ಯುಬಿಎಫ್/ಆರ್‌ಓ/1356/05–06
ಎಆರ್‌ಇ/ಯುಬಿಎಫ್/ಆರ್‌ಓ/826/06–07 (ವ)
(ವ) 373/06–07

ಉತ್ತರ ಕನ್ನಡ ಜಿಲ್ಲಾ, ಶಿರಸಿ ತಾಲ್ಲೂಕು, ಶಿರಸಿ ಗ್ರಾಮದ ನಿವಾಸಿ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ್, ಹುಬ್ಬಳ್ಳಿ ರೋಡ್, ಶಿರಸಿ ಇವರು ಈ ಕೆಳಗೆ ತೋರಿಸಿದ ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ್, ಹೊಸಪೇಟೆ ರೋಡ್, ಶಿರಸಿ, ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿ ಹಾಗೂ ಅದರಲ್ಲಿ ಇರತಕ್ಕ ಇಮಾರತು ಸಹಿತ ಮುಂದುವರಿದ ಬಹಿರಂಗ ಹರಾಜಿನಲ್ಲಿ 2008ನೇ ಇಸವಿ ಜುಲೈ ತಿಂಗಳ 29ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತಾರಾಗಿಯೂ ಮತ್ತು ದರಖಾಸ್ತು ರಖಂ ರೂ.10,00,000/– (ರೂಪಾಯಿ ಹತ್ತು ಲಕ್ಷ ಮಾತ್ರ) ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದ ಪ್ರಯುಕ್ತ ಸದರಿ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಅಬ್ದುಲ್ ಕರೀಂ ಅಬ್ದುಲ್ ಖಾನ್, ಹೊಸಪೇಟೆ ರೋಡ್, ಶಿರಸಿ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ್, ಹುಬ್ಬಳ್ಳಿ ರೋಡ್, ಶಿರಸಿ ಇವರು ಉತ್ತರಾಧಿಕಾರಿಗಳಾಗಿದ್ದಾರೆ ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲ್ಲೂಕು | ಗ್ರಾಮ | ಸಿಟಿ ಸರ್ವೇ ನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಶಿರಸಿ | ಶಿರಸಿ | 193/4 | 262 ಚೌ. ಯಾರ್ಡ್ ಪೈಕಿ 240 2/9 ಚೌ.ಯಾರ್ಡ್ | ಶ್ರೀ ಕೆ. ಅಬ್ದುಲ್ ಕರೀಂ ತಂದೆ ಹಾಜಿ ಕೆ. ಅಬ್ದುಲ್ ಹಮೀದ್. |
| | | ಇದರಲ್ಲಿ ಇರತಕ್ಕ ಇಮಾರತು ಸಹಿತ | | |

ಮುಕ್ಕಾಂ: ಶಿರಸಿ
ದಿನಾಂಕ:17.11.2008
ಪಿ.ಆರ್.1327

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ
ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ.